

ಗೌರವ ಸಂಪಾದಕರು ;

ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



**ಸಂಪುಟ 12] ಸಪ್ತಗಿರಿ ಅಕ್ಟೋಬರ್ 1981 [ಸಂಚಿಕೆ 5**

# ವಿಷಯಸೂಚಿ

## ಸಂಪಾದಕೀಯ

### ಕಾವೇರೀ ಪುಷ್ಕರ

ಕನ್ನಡ ನಾಡಿನ ಕಣ್ಣು ಕಾವೇರಿ ಎನ್ನುತ್ತಾರೆ. ಕರ್ನಾಟಕದ ದಕ್ಷಿಣದಲ್ಲಿ ಕೊಡಗಿನ ತಲಕಾವೇರಿಯಲ್ಲಿ ಹುಟ್ಟಿ ಮೈಸೂರು ಮಂಡ್ಯ ಜಿಲ್ಲೆಗಳನ್ನು ತನ್ನ ಸಿಹಿ ನೀರಿನಿಂದ ಹಸಿರಾಗಿಸಿ ಬೆಂಗಳೂರಿನವರಿಗೂ ಜೀವನಾಧಾರವಾಗಿ ತಮಿಳುನಾಡಿನಲ್ಲಿ ಹರಿದು ಬಂಗಾಳಕೊಲ್ಲಿಯನ್ನು ಸೇರುವ ಈ ನದಿಗೆ ಕರ್ನಾಟಕದಲ್ಲಿ ಕೃಷ್ಣರಾಜಸಾಗರ ಹಾಗೂ ತಮಿಳುನಾಡಿನ ಮೆಟ್ಟೂರುಗಳಲ್ಲಿ ಅಣೆ ಕಟ್ಟಿ ಸುತ್ತಲಿನ ಬಯಲನ್ನು ಹುಲುಸುಗೊಳಿಸಲಾಗಿದೆ.

ಕಾವೇರಿ ಭಾರತೀಯರ ಪ್ರಾತಃಸ್ಮರಣೀಯಳು. 'ಗಂಗೇಚ ಯಮುನೇ ಚೈವ ... .... ...' ಎನ್ನುತ್ತ ಕಾವೇರಿಯನ್ನೂ ಕರಸ್ಥಲಕ್ಕೆ ಆಹ್ವಾನಿಸುವುದು ಹಿಂದುಗಳ ದೈನಂದಿನ ವಿಧಿ. ಮೇರುವಿನ ಏರುವಿಕೆಯನ್ನು ತಡೆದ ಅಗಸ್ತ್ಯನ ಪತ್ನಿಯಾದ ಕಾವೇರಿ ಕವೇರತನಯೆ. ಆಕೆಯ ಹುಟ್ಟಿಗೆ ಕಾರಣವೇ ತನ್ನ ತಂದೆಗೆ ಮೋಕ್ಷ ಕಲ್ಪಿಸುವುದಾಗಿದ್ದಿತು. ಎಂದ ಮೇಲೆ ಕಾವೇರಿಯ ತ್ಯಾಗ, ಮಮತೆಗಳಿಗೆ ಮತ್ತೊಂದು ನಿದರ್ಶನ ನೀಡಲೇಕೆ? ಕವೇರನು ನದಿಯಾಗಿ ಪರಿವರ್ತಿತಳಾದ ಕಾವೇರಿಯಲ್ಲಿ ಮಿಂದು ಮೋಕ್ಷಪದವಿ ಪಡೆದ. ಅದರೊಂದಿಗೆ ಪುಷ್ಕರ ಕಾಲದಲ್ಲಿ ಗುರುವಿನ ಸೇರ್ಪಡೆ. ಗುರು ತುಲಾರಾಶಿಯಲ್ಲಿ ಪ್ರವೇಶಿಸುವ ಸೆಪ್ಟೆಂಬರ್ 27 ರಿಂದ ಕಾವೇರಿ ಪುಷ್ಕರಗಳು ಆರಂಭ. ಕಾವೇರಿ ಸ್ನಾನಕ್ಕೆ ಈ ಮೊದಲ ಹನ್ನೆರಡು ದಿನಗಳಿಂದಧಿಕ ಸುಮೂಹೂರ್ತ ದೊರಕಲಾರದೇನೋ. ಈ ಬಾರಿಯಂತೂ ತುಂಬ ಚೆನ್ನಾದ ಮಳೆಗಳಾಗಿವೆ. ಕಾವೇರಿಯ ಇಕ್ಕೆಲದ ಐನೂರು ಮೈಲಿಗಳಿಗೂ ಮಿಕ್ಕಿದ ದಂಡೆಗಳು ಹಸುರಿನಿಂದಾವೃತನಾಗಿ ಹೊಸ ಶೋಭೆಯನ್ನು ತಂದಿವೆ. ಮೇಲೆ ಈ ನದಿಯ ದಂಡೆಯ ಶ್ರೀರಂಗಪಟ್ಟಣ, ಶ್ರೀರಂಗಂ ಇತ್ಯಾದಿ ತೀರ್ಥ ಕ್ಷೇತ್ರಗಳ ಪಾವಿತ್ರ್ಯವೂ ಕಲೆತಿದೆ. ಬನ್ನಿ; ಕಾವೇರಿಯಲ್ಲಿ ಮಿಂದು ಶ್ರೀರಂಗನಾಥನ ದರ್ಶನಾರ್ಹರಾಗೋಣ.

---

# ಮಹಾಬಲಿಪುರಂ - ಒಂದು ಪರಿಚಯ

ಮಹಾಬಲಿಪುರಂ ಮದ್ರಾಸಿನ ದಕ್ಷಿಣಕ್ಕೆ 37 ಮೈಲಿನೂರದಲ್ಲಿದೆ. ಸಮುದ್ರ ದಂಡೆಯ ಮೇಲಿರುವ ಸುಂದರ ಸ್ಥಳ- ಭಾರತದಾದ್ಯಂತ ಹರಡಿಕೊಂಡಿರುವ ನೂರಾರು, ಸಾವಿರಾರು ಅನರ್ಘ್ಯರತ್ನಗಳಲ್ಲೊಂದು ಈ ಮಹಾಬಲಿಪುರಂ. ಇಂದು ಮಹಾಬಲಿಪುರಂ ಒಂದು ಸಣ್ಣಸ್ಥಳ. ಸಮುದ್ರದ ಉಸುಕಿನಲ್ಲಿ ಸತ್ತುವರೆಯಲ್ಪಟ್ಟ ಪ್ರವಾಸಿಗರ ತಾಣ. ಆದರೆ ಒಂದು ಕಾಲಕ್ಕೆ ಪಲ್ಲವ ಸಾಮ್ರಾಜ್ಯದ ಮುಖ್ಯ ರೇವು ಪಟ್ಟಣವಾಗಿತ್ತು. ರಾಜ್ಯದ ಪ್ರಮುಖ ನಗರವಾಗಿತ್ತು.

ಅಂದಿನ "ಮಾಮಲ್ಲಪುರಂ" ಇಂದಿನ ಮಹಾಬಲಿಪುರಂ ಆಗಿದೆ. ಇದರ ಬಗ್ಗೆ ಸ್ವಲ್ಪ ತಿಳಿದು ಕೊಳ್ಳೋಣ. ಮಹಾಬಲಿಪುರಂ ಪಲ್ಲವರಿಗೂ ಮೊದಲು ಇಂದಿನಂತೆ ಒಂದು ಸಣ್ಣ ಹಳ್ಳಿಯಾಗಿತ್ತು. ದಕ್ಷಿಣ ಭಾರತದ ಧಾರ್ಮಿಕ ಇತಿಹಾಸ ಹೇಳುವಂತೆ ವೈಷ್ಣವರ ಮುಖ್ಯಕೇಂದ್ರವಾಗಿತ್ತು. ಪ್ರಸಿದ್ಧ ವೈಷ್ಣವಸಂತರಾದ ಭೂದತ್ತಾಳ್ವರರ ಜನ್ಮಸ್ಥಳವಾಗಿತ್ತು. ಪ್ರಖ್ಯಾತ ತಿರುಮಂಗೈ ಆಳ್ವಾರರು ಈ ಹಳ್ಳಿಗೆ ಭೇಟಿ ಕೊಟ್ಟು ದೇವನ ಅಂದಚೆಂದದ ಬಗ್ಗೆ ಹಾಡಿದ್ದಾರೆ. ಇಲ್ಲೆಲ್ಲಾ ಬರುವ ಹೆಸರು "ಕಡಲ ಮಲ್ಲೈ ಸ್ಥಲಾಸಯುನಂ."

ಮಹಾಬಲಿಪುರಂ ಅನ್ನು ಪ್ರಸಿದ್ಧಗೊಳಿಸಿದ ಪಲ್ಲವರ ಕಾಲ 7–8 ನೇ ಶತಮಾನ- ಅವರಲ್ಲಿ ಮುಖ್ಯರು ಮೂವರು; ಮಹೇಂದ್ರವರ್ಮ (600–630 ಕ್ರಿ.ಶ); ಆವನ ಮಗ ನರಸಿಂಹವರ್ಮ (ಮಹಾಮಲ್ಲ) (630–670 ಕ್ರಿ.ಶ) ನರಸಿಂಹವರ್ಮ II (ರಾಜಸಿಂಹ). ನರಸಿಂಹ Iನಿಗೆ 'ಮಹಾಮಲ್ಲ' ಎಂಬ ಬಿರುದಿತ್ತು. ಅವನ ಶಕ್ತಿ ಸಾಮರ್ಥ್ಯ ಉತ್ಸಾಹಗಳೇ ಈ ಸಣ್ಣ ಹಳ್ಳಿಯನ್ನು ಪ್ರಸಿದ್ಧ ಪಟ್ಟಣವನ್ನಾಗಿ ಮಾಡಿವೆ. ಅವನನ್ನು ಅನುಸರಿಸಿಯೇ ಮಾಮಲ್ಲಪುರಂ ಎಂದದ್ದು ಮತ್ತು ಹಳೇರಾಜನನ್ನು ಮರೆತು ಪುರಾಣದ ರಾಜ ಮಹಾಬಲಿಯನ್ನು ಸೇರಿಸಿಕೊಂಡು ಈ ಹೆಸರು ನಿಂತಿತು.

ಪಲ್ಲವರು ಗುಹಾಂತರ ಶಿಲ್ಪ ಕಲೆಗೆ ಪ್ರಸಿದ್ಧರು. ಅವರು ನಾವು ಕಟ್ಟಿಸಿದಂತೆ ಕಟ್ಟಡಗಳನ್ನು, ಒಂದರ ಮೇಲೊಂದು ಪೇರಿಸಿಟ್ಟ ಕಲ್ಲಿಂದ. ಇಟ್ಟಿಗೆಯಿಂದ, ಗಾರೆಯಿಂದ ಕಟ್ಟಿಸಲಿಲ್ಲ, ಬದಲಾಗಿ ಶತಮಾನಗಳಿಂದ ಜಗ್ಗದೆ, ನಿಂತಿದ್ದ ಕಲ್ಲುಬಂಡೆಗಳನ್ನು ಕಡೆದು ಕೊರೆದು, ದೇವಸ್ಥಾನ ನಿರ್ಮಿಸಿದರು. ಇದರಿಂದಲೇ ಮಹಾಬಲಿಪುರಂ "ದಕ್ಷಿಣ ಭಾರತದ ಕಲೆಯ ತೊಟ್ಟಿಲು" ಎನ್ನಿಸಿಕೊಂಡಿದೆ. ಮಾಮಲ್ಲಪುರಂ ವರ್ಣನೆ, 7ನೇ ಶತಮಾನದಲ್ಲಿ ಭಾರತಕ್ಕೆ ಭೇಟಿಕೊಟ್ಟ ಚೀನಿ ಪ್ರವಾಸಿಗ ಹ್ಯೂ-ಎನ್'-ತ್ಸಾಂಗ್‌ನ ಬರಹಗಳಲ್ಲೂ ಕಂಡು ಬರುತ್ತದೆ.

ಮಾಮಲ್ಲಪುರಂ ಇತಿಹಾಸದಲ್ಲಿ ಏಳು ಪಗೋಡಗಳು (ಏಳು ಗೋಪುರಗಳು) ಎಂದೂ ಪ್ರಸಿದ್ಧವಾಗಿದೆ. ಯೂರೋಪಿನಿಂದ ಚೈನಾ ಹಾಗೂ ಇತರೆಡೆಗಳಿಗೆ ಹೋಗುತ್ತಿದ್ದ ನಾವಿಕರು ಹೀಗೆ ಕರೆದಿರಬಹುದೆನ್ನಲಾಗಿದೆ. ಆದರೆ ಈ ಹೆಸರು ಹಲವಾರು ತಪ್ಪು ಅಭಿಪ್ರಾಯಗಳಿಗೆ ಎಡೆ ಮಾಡಿಕೊಟ್ಟಿದೆ.

ಸ್ಥಳೀಯ ಜನರು ಸಮುದ್ರ ತೀರದಲ್ಲಿರುವ ದೇವಸ್ಥಾನ ಬಿಟ್ಟು 6 ದೇವಸ್ಥಾನಗಳಿತ್ತು ಎಂದು ಹೇಳುತ್ತಾರೆ. ಇನ್ನೊಂದು (ಏಳನೆಯದು) ಸಮುದ್ರದ ನೀರಿನಲ್ಲಿ ಮುಳುಗಿ ಹೋಗಿದೆ ಎನ್ನುತ್ತಾರೆ. ದೇವಸ್ಥಾನಗಳು ಐದಿದ್ದು, ಪಾಂಡವರ ಹೆಸರಲ್ಲಿರುವುದರಿಂದ, ಜನ ಪಾಂಡವರನ್ನು ಈ ಮಾಮಲ್ಲಪುರಂ ಜೊತೆಗೆ ಸೇರಿಸಿದ್ದಾರೆ. ಆದರೆ ಇದು ಸಂಪೂರ್ಣ ಸ್ಥಳೀಯ ಕಲ್ಪನೆಯೇ ಹೊರತು, ಯಾವುದೇ ಐತಿಹಾಸಿಕ, ಪೌರಾಣಿಕ ಆಧಾರಗಳಿಲ್ಲ.

ಮಾಮಲ್ಲಪುರಂನ ಶಿಲ್ಪಕಲೆಗೆ ಮೂವರು ಪಲ್ಲವ ರಾಜರೇ ಕಾರಣ. ಅವರು ಈ ಕಲೆಯನ್ನು ರಾಜ್ಯದ ಆಡಳಿತವಂತೆ ಗಂಭೀರವಾಗಿ ಪರಿಗಣಿಸುತ್ತಿದ್ದರು. ದಂಡೆಯ ದೇವಸ್ಥಾನ, ಈಶ್ವರ ದೇವಸ್ಥಾನ ದೀಪಸ್ಥಂಭ, ಇತರ ಕೆಲವು ಸಣ್ಣ ಪುಟ್ಟ ದೇವಸ್ಥಾನಗ



ಸಮುದ್ರದಡದ ದೇವಾಲಯ. ಮಹಾಬಲಿಪುರಂ.

ಳನ್ನು ಬಿಟ್ಟರೆ, ಮಿಕ್ಕ ಎಲ್ಲಾ ಅಖಂಡ ಶಿಲ್ಪಕೃತಿಗಳು, ಗುಹೆಗಳು ನರಸಿಂಹ ವರ್ಮ Iನ ಸೃಷ್ಟಿ. ಆದರೆ ಎರಡು ಗುಹೆಗಳಲ್ಲಿ ಮಹೇಂದ್ರವರ್ಮನ ಶೈಲಿಯು ಕಂಡು ಬರುತ್ತದೆ. ಅವೆಂದರೆ ಧರ್ಮರಾಜ, ಕೂಬಿ ಕಲ್ ಮಂಟಪಗಳು. ಇವೆರಡರ ಕಂಬಗಳು ಬೃಹತ್ತಾಗಿವೆ. ಆದರೆ ಹೆಚ್ಚಾಗಿ ಕಡೆದಿಲ್ಲ, ಮತ್ತು ದ್ವಾರಪಾಲಕರು ಮುಂದೆ ನೋಡುತ್ತಿದ್ದಾರೆ. ಬದಿಗಳಲ್ಲಿ ನರಸಿಂಹವರ್ಮನ ಗುಹೆಗಳಲ್ಲಿ ದ್ವಾರಪಾಲಕರು ಬದಿಗೆ ಮುಖ ಮಾಡಿದ್ದಾರೆ. ತೀರದ ದೇವಸ್ಥಾನ, ಈಶ್ವರ ದೇವಸ್ಥಾನ ಮತ್ತು ಇನ್ನೆರಡು ದೇವಸ್ಥಾನ ಕಟ್ಟಿಸಿದ ಕೀರ್ತಿ ರಾಜಸಿಂಹನಿಗೆ ದೊರಕಿದರೆ ಅಖಂಡ ಶಿಲೆಗಳಿಂದ ದೇವಸ್ಥಾನ ಕಡೆದು ಕಟ್ಟಿಸಲು ಶುರುಮಾಡಿದ ಕೀರ್ತಿ ಮಹೇಂದ್ರವರ್ಮIನಿಗೆ ದೊರಕುತ್ತದೆ.

ಪರಿಣಿತರು ಮಾಮಲ್ಲಪುರಂನ ಶಿಲ್ಪ. ವಾಸ್ತುಕಲೆಯನ್ನು ನಾಲ್ಕು ಬಗೆಯಾಗಿ ವಿಂಗಡಿಸುತ್ತಾರೆ. (ಗುಹೆಗಳು, ಅಖಂಡಶಿಲ್ಪಗಳು. ಉಬ್ಬಿದ ಶಿಲೆಯ ಕೆತ್ತನೆಗಳು ಇತರ ಕಟ್ಟಡ ಶೈಲಿ) ಕಲ್ಲಲ್ಲಿ ಕಡೆದಿರುವ ದೇವಸ್ಥಾನಗಳು ನರಸಿಂಹವರ್ಮನ ಕಾಲಕ್ಕೆ ಸೇರಿದವು. ತನ್ನ ತಂದೆಯಿಂದ ರಾಜ್ಯದ ಕೆಲವೆಡೆಗಳನ್ನು—ಅಂದರೆ ದಲವನೂರು, ಮಂಡಗಾಪಟ್ಟು, —ಪಡೆದು ಮಹಾಬಲಿಪುರಂನಲ್ಲಿ ಕಟ್ಟಿಸಿದ ಎನ್ನಲಾಗಿದೆ.

ಆದರೆ ತಂದೆ ಮಹೇಂದ್ರವರ್ಮನಿಗೂ, ಮಗ ನರಸಿಂಹವರ್ಮನಿಗೂ ಸಾಕಷ್ಟು ವ್ಯತ್ಯಾಸಗಳಿವೆ. ಮಗ ತಂದೆಯನ್ನು ಅನುಕರಿಸಿ ಕಟ್ಟಿಸಿದ. ಆದರೆ ಇದು ಅವನಿಗೆ ಹಿಡಿಸಲಿಲ್ಲ. ಅನುಕರಣೆಯಲ್ಲೂ ವೈಶಿಷ್ಟ್ಯ ಕಾಣಲು ಬಯಸಿದ. ಇಡೀ ದೇವಸ್ಥಾನ ಕಲೆಗೆ ಬೇರೆ ರೂಪ ಕೊಡಲು ನೋಡಿದ. ಅವನ ಅನುಕರಣ ಮೇಧಾವಿಯ ಅನುಕರಣೆ. ಒಳ್ಳೆಯದರ ಜೊತೆಗೆ ತನ್ನದೇ ವೈಶಿಷ್ಟ್ಯ ಗಂಭೀರತೆ ಜೋಡಿಸುವುದು. ತಂದೆ ದಕ್ಷಿಣ ಭಾರತದಲ್ಲಿ ಮೊದಲ ಬಾರಿಗೆ ಶಿಲೆಗಳನ್ನು ಕಡೆದು ಗುಹಾಂತರ ದೇವಾಲಯ ಕಟ್ಟಿಸಿದ. ಅದರ ಅಂದ,ಗಾಂಭೀರ್ಯ ಹೆಚ್ಚಿಸಿದ ಈ ಮಗ. ಅಖಂಡ ಶಿಲೆಗಳನ್ನು ಕಡೆಸಿ ನಿಂತಿರುವ ದೇವಸ್ಥಾನಕಲೆಗಾಗಿ ಈ ದೇವಸ್ಥಾನಗಳು ಸಾಕ್ಷಿ ಹೇಳುತ್ತವೆ. ರಾಜಸಿಂಹ ಕಂಚಿಪುರದಲ್ಲಿ ಕೈಲಾಸನಾಥ ದೇವಾಲಯ ಕಟ್ಟಿಸಿದ. ಆದರೆ ರಾಜಸಿಂಹನ ಕಾಲಕ್ಕೆ ಅವನ ಹಿರಿಯರ ಕಾಲದ ಶಿಲೆಯಿಂದ ಕಡೆಯುವ ದೇವಸ್ಥಾನ ಕಲೆ ಮೂಲೆಗೆ ಬಿದ್ದಿತ್ತು. ಕಲ್ಲ ಮೇಲೆ ಕಲ್ಲು ಪೇರಿಸಿ ದೇವಸ್ಥಾನ ಕಟ್ಟಿಸಿದನು.

ಮಾಮಲ್ಲಪುರಂ ದೇವಸ್ಥಾನಗಳು ಅಲಂಕಾರಿಕ ಕೆತ್ತನೆಯಲ್ಲಿ ಹಿಂದೆ ಬಿದ್ದಿವೆ ಎಂಬ ಅಭಿಪ್ರಾಯವಿದೆ. ಅಜಂತ ಎಲ್ಲೋರಗಳಷ್ಟು ಸುಂದರವಾಗಿಯೂ ಇಲ್ಲ ಎನ್ನುತ್ತಾರೆ.

ಆದರೆ ಮಹಾಬಲಿಪುರಂ ದೇವಸ್ಥಾನಕ್ಕೆ ಬಳಸಿರುವ ಕಲ್ಲು ಗ್ರಾನೈಟ್ ಕಲ್ಲು; ಬಹು ಗಟ್ಟಿಯಾದಂತಹ ಕಲ್ಲು. ಆದರೆ ಬಹುಪಾಲು ಪ್ರಾಚೀನ ದೇವಸ್ಥಾನಗಳಿಗೆ(ಅಂದರೆ ಚೋಳ ಚಾಲುಕ್ಯ) ಉಪಯೋಗಿಸಿರುವ ಕಲ್ಲು Lime Stone (ಬೆಣಚು ಕಲ್ಲು) Sand Stone (ಮರಳು ಕಲ್ಲು)Soap Stone (ಬಳಪದ ಕಲ್ಲು) ಈ ಕಲ್ಲುಗಳು ಅಂಥ ಗಟ್ಟಿಯಿಲ್ಲದೆ, ಕೆತ್ತನೆ ಕೆಲಸಕ್ಕೆ ಯೋಗ್ಯವಾದವು ಮತ್ತು ಅಜಂತ ಎಲ್ಲೋರಗಳಲ್ಲೂ ಇಂಥ ಕಲ್ಲು ಬಳಸಿರುವುದುಂಟು. ಆದರೆ ಮಹಾಬಲಿಪುರಂನಲ್ಲಿ ಇಂಥ ನುಣುಪು ಕಲ್ಲು ಬಳಸಿಲ್ಲ. ಇಲ್ಲಿ ಒರಟು ಶಿಲೆಯಲ್ಲಿ ಘನವಾದ ಕೃತಿ ರಚಿಸಿದ್ದಾರೆ. ಇದು ಇಲ್ಲಿನ ಗಮನಾರ್ಹ ಅಂಶ.

ಇಲ್ಲಿನ (ಗುಹೆಗಳಲ್ಲಿ) ಕೆಲವು ಅಲಂಕಾರಿಕ ಪಟ್ಟಿಗಳು ಬಾದಾಮಿಯ ಚಾಲುಕ್ಯರ ಅನುಕರಣೆಯಂತೆ ಕಾಣುತ್ತವೆ. ಇಲ್ಲಿ ಕೆತ್ತಿರುವ ಅರ್ಜುನನ ತಪಸ್ಸು ತೋರಿಸುವ ಕಲೆ ಅತ್ಯಂತ ಸುಂದರವಾಗಿದೆ ಮತ್ತು ಇದು ಗಾತ್ರದಲ್ಲಿ ಪ್ರಪಂಚಕ್ಕೆಲ್ಲಾ ದೊಡ್ಡದು ಹಾಗೂ ಸುಂದರವಾದದ್ದು. ಇದು 90 ಅಡಿ ಉದ್ದ 30 ಅಡಿ ಸರಾಸರಿ ಎತ್ತರವಿದೆ. ಇದರಲ್ಲಿ ನರಸಿಂಹ ವರ್ಮನ ಕಾಲದ ಕಲಾ ನೈಪುಣ್ಯತೆ ಉತ್ತುಂಗ ಶಿಖರ ಮುಟ್ಟಿದೆ.

ವಿಜಯನಗರ ಚೋಳ, ಚಾಲುಕ್ಯ ದೇವಸ್ಥಾನಗಳಲ್ಲಿ ಕಾಣುವ ಕಲೆಗೆ ಬಹುದೂರ ಇರುವ ಅತ್ಯಂತ ಅಲಂಕಾರಿಕವಾಗಿ ಸುಂದರವಾಗಿ ಅತ್ಯಂತ ನೈಪುಣ್ಯದಿಂದ ಕಲ್ಲಲ್ಲಿ ಕೆತ್ತಿಸಿದ, ಮಹಾಬಲಿಪುರಂನಲ್ಲಿ ಪಲ್ಲವರು ಕೆತ್ತಿಸಿರುವ ಪಂಚರಥಗಳು ಅಲಂಕಾರಿಕವಾಗಿಲ್ಲ. ಆದರೆ ಅವುಗಳು ಗಾಂಭೀರ್ಯ ದಿಟ್ಟತನ, ಸೌಂದರ್ಯ, ಸರಳತೆ, ಗಾತ್ರ, ರೂಪ ಚೋಳ ಚಾಲುಕ್ಯರ ಕಲ್ಲಿನ ಕತ್ತನೆಗಿಂತ ಮನಸ್ಸಿಗೆ ನಾಟುವಂತಿದೆ. ಸದಾ ಕಾಲಕ್ಕೂ ನಮ್ಮ ಜ್ಞಾಪಕದಲ್ಲಿ ಉಳಿಯುತ್ತವೆ.

*

ಯುವ ಭಾರತಿಯಿಂದ ಕನ್ನಡಕ್ಕೆ

**ರಾ. ಮುರಳಿ.**

ಯೋಗ ಮೀಮಾಂಸೆ

# ಯೋಗ ಹಾಗೂ ಸ್ತ್ರೀ

ಯೋಗವಿದ್ಯೆಯು ಅತ್ಯಂತ ಪುರಾತನವಾದುದು. ಋಗ್ವೇದದ ಶ್ಲೋಕದಲ್ಲಿ ಯೋಗಾಭ್ಯಾಸದಿಂದ ಋಷಿಯೊಬ್ಬನು ದೈವಿಕಶಕ್ತಿಯನ್ನು ಪಡೆದಂಥ ನಿದರ್ಶನವಿದೆ. ಕೆಲವು ಉಪನಿಷತ್ತುಗಳಲ್ಲಿಯೂ ಯೋಗ ಶಾಸ್ತ್ರದ ಬಗ್ಗೆ ಅನೇಕ ನಿದರ್ಶನಗಳಿವೆ. ಯೋಗಶಾಸ್ತ್ರಕ್ಕೆ ಭಾರತ ಜನ್ಮಭೂಮಿ. ಆದರೂ ಯೋಗಶಾಸ್ತ್ರವು ಒಂದು ದೇಶದ, ಒಂದು ಕಾಲದ, ಒಂದು ಜನಾಂಗದ ಸ್ವತ್ತಲ್ಲ. ಭಾರತೀಯ ಋಷಿ ಮುನಿಗಳು ಇಡೀ ವಿಶ್ವಕ್ಕೆ ಕೊಟ್ಟಂತಹ ದಿವ್ಯಕೊಡುಗೆಯಾಗಿದೆ. ಭಾರತೀಯ ಆಸ್ತಿಕ ದರ್ಶನಗಳಲ್ಲಿ ಯೋಗವೂ ಒಂದು. ಜ್ಞಾನ, ಭಕ್ತಿ, ಕರ್ಮಗಳ ತ್ರಿವೇಣಿ ಸಂಗಮದಂತಿರುವ ಭಗವದ್ಗೀತೆಯೂ ಯೋಗವನ್ನೇ ಬೋಧಿಸುತ್ತದೆ.

ಹಿಂದೂ ಸಿದ್ಧಾಂತದ ಪ್ರಕಾರ ಜೀವಾತ್ಮನು ಪರಮಾತ್ಮನ ಒಂದು ಅಂಶ. ಪರಮಾತ್ಮನನ್ನು ಹೊಂದುವ ಮಾರ್ಗವನ್ನು ತೋರಿಸುವುದೇ ಯೋಗದ ಗುರಿ. ಇದೇ ಮಾನವ ಜೀವನದ ಧ್ಯೇಯ. ಅಷ್ಟಾಂಗ ಯೋಗದ ಮೊದಲನೆಯ ಎರಡು ಸೂತ್ರಗಳಾದ ಯಮ, ನಿಯಮಗಳು ಶಿಸ್ತು ಮತ್ತು ಸಂಯಮದ ಜೀವನಕ್ಕೆ ತಳಹದಿಯಾಗಿವೆ. ಮೂರು ; ನಾಲ್ಕನೆಯ ಅಂಗಗಳಾದ ಆಸನ ಪ್ರಾಣಾಯಾಮಗಳು ದೈಹಿಕ, ಮಾನಸಿಕ ಹಾಗೂ ಆಧ್ಯಾತ್ಮಿಕ ಉನ್ನತಿಗೆ ಸಾಧನವಾಗಿವೆ. ದೇಹ, ಮನಸ್ಸು, ಆತ್ಮ- ಈ ಮೂರರ ಉನ್ನತಿ ಯೋಗದ ಗುರಿ. ಮಾನವನು ಜೀವನದಲ್ಲಿ ಸಫಲತೆ ಹೊಂದಲು ಇಹಪರ ಎರಡೂ ಬಹು ಮುಖ್ಯ. ಇವೆರಡೂ ಹಕ್ಕಿಯ ಎರಡು ರೆಕ್ಕೆಗಳಂತೆ. ಒಂದು ರೆಕ್ಕೆ ನ್ಯೂನವಾದರೂ ಹಕ್ಕಿ ಹಾರಲಾರದು.

ಪ್ರಾಚೀನ ಕಾಲದಿಂದಲೂ ಸ್ತ್ರೀಯರು ಪುರುಷರಿಗೆ ಸಮಾನರಾಗಿ ಯೋಗಾಭ್ಯಾಸವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದರು ಎಂಬ ವಿಚಾರ ಅನೇಕರಿಗೆ ತಿಳಿದಿಲ್ಲ. ವೈಜ್ಞಾನಿಕವಾಗಿ ಅತ್ಯಂತ ಮಹತ್ವದ ಸಾಧನೆಮಾಡಿರುವ ಪಾಶ್ಚಾತ್ಯ ದೇಶಗಳ ಸ್ತ್ರೀ-ಪುರುಷರೂ, ಹೆಚ್ಚಿನ ಸಂಖ್ಯೆಯಲ್ಲಿ ಭಾರತಕ್ಕೆ ಬಂದು ನೆಲೆಸಿ ಯೋಗಾಭ್ಯಾಸದಲ್ಲಿ ಪರಿಣತಿ ಪಡೆದು ತಮ್ಮ ದೇಶಗಳಲ್ಲಿ ಹೆಚ್ಚಿನ ಪ್ರಚಾರ ಮಾಡುತ್ತಿದ್ದಾರೆ.

ಕೆಳಗಿನ ನಿದರ್ಶನಗಳು ಸ್ತ್ರೀಯರು ಯೋಗಾಭ್ಯಾಸ ಮಾಡಲು ಅರ್ಹರು ಎಂಬುದನ್ನು ಖಚಿತ ಪಡಿಸುತ್ತವೆ. ಯೋಗಕ್ಕೆ ಅಧಿಪತಿ ಶಿವ. ಶಿವನು ತನ್ನ ಪತ್ನಿಯಾದ ಪಾರ್ವತಿಯನ್ನೇ ಮೊದಲ ಶಿಷ್ಯೆಯನ್ನಾಗಿ ಪರಿಗ್ರಹಿಸಿ, ಯೋಗವಿದ್ಯೆಯನ್ನು ಹೇಳಿ ಕೊಟ್ಟನು.

ವೇದಗಳ ಕಾಲದಲ್ಲಿ ಮಹರ್ಷಿ ಯಾಜ್ಞವಲ್ಕ್ಯರು ತಮ್ಮ ಪತ್ನಿಯಾದ ಮೈತ್ರೇಯಿಗೆ ಯೋಗವಿದ್ಯೆಯನ್ನು ಹೇಳಿಕೊಟ್ಟರು, ಲೋಪಾಮುದ್ರಾ, ಕೂಡಲಾ ಮೊದಲಾದ ಯೋಗಿನಿಯರ ನಿದರ್ಶನವಿದೆ.

ರಾಮಾಯಣದ ಕಾಲದಲ್ಲಿ ಸ್ತ್ರೀಯರು ಯೋಗಾಭ್ಯಾಸ ಮಾಡುತ್ತಿದ್ದರು. ಇದಕ್ಕೆ ರಾಮನ ತಾಯಿಯಾದ ಕೌಸಲ್ಯೆಯೇ ಸಾಕ್ಷಿಯಾಗಿರುತ್ತಾಳೆ. ಮಲತಾಯಿಯಾದ ಕೈಕೇಯಿಯ ಅಭೀಷ್ಟದಂತೆಯೂ, ತಂದೆಯಾದ ದಶರಥ ಮಹಾರಾಜನ ಮಾತನ್ನು ಉಳಿಸುವುದಕ್ಕಾಗಿಯೂ, ಶ್ರೀರಾಮಚಂದ್ರನು ಹದಿನಾಲ್ಕು ವರ್ಷಗಳಕಾಲ ವನವಾಸಕ್ಕೆ ಹೋಗಬೇಕಾಗುತ್ತದೆ. ಆಗ ಶ್ರೀರಾಮಚಂದ್ರನು, ವನವಾಸಕ್ಕೆ ಹೊರಡುವ ಮೊದಲು ತಾಯಿಯಾದ ಕೌಸಲ್ಯೆಗೆ ನಮಸ್ಕಾರಮಾಡಲು ಬರುತ್ತಾನೆ. ತಾಯಿಗೆ ಸಹಜವಾದ ದುಃಖ ಅವಳ ಮನಸ್ಸಿಗೆ ಉಂಟಾಗುತ್ತದೆ. ಆಗ ಆಕೆ ಪ್ರಾಣಾಯಾಮವನ್ನು ಮಾಡಿ ತನ್ನ ಮನಸ್ಸನ್ನು ಹತೋಟಿಗೆ ತಂದುಕೊಳ್ಳುತ್ತಾಳೆ. ಶ್ರೀರಾಮಚಂದ್ರನನ್ನು ಶುದ್ಧವಾದ ಮನಸ್ಸಿನಿಂದಲೂ, ಪರಿಶುದ್ಧವಾದ ಹೃದಯದಿಂದಲೂ ಆಶೀರ್ವದಿಸುತ್ತಾಳೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಈ ರೀತಿ ಹೇಳಿರುತ್ತಾನೆ :- "ಸ್ತ್ರೀಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ॥ (ಅ.೯ - ಶ್ಲೋ - 32) ಇಲ್ಲಿ ಯೋಗಮಾರ್ಗದಲ್ಲಿ ನಡೆದು ಮೋಕ್ಷ ಪಡೆಯಲು ಸ್ತ್ರೀಯರು ಅರ್ಹರು ಎಂಬ ಅರ್ಥ ವ್ಯಕ್ತವಾಗಿದೆ.

ಕುಮಾರಿ ಟಿ. ಎನ್. ಮಹಾಲಕ್ಷ್ಮಿ

ಯೋಗಾಭ್ಯಾಸವನ್ನು ಮಾಡಲು, ಕಲಿಯಲು ವಯಸ್ಸಿನ ಪರಿಮಿತಿ ಇಲ್ಲ. ಎಂಟು ವರ್ಷ ಮೀರಿದ ಎಂಭತ್ತು ವರ್ಷದವರೆಗಿನ ಸ್ತ್ರೀಯರೆಲ್ಲರೂ ಅಭ್ಯಾಸ ಮಾಡಬಹುದು. ಯುವಕರು, ಮುದುಕರು, ಅತಿವಯಸ್ಸಾದವರು, ರೋಗಗ್ರಸ್ತರು,ದುರ್ಬಲರು, ಸ್ತ್ರೀ ಪುರುಷರಾದಿಯಾಗಿ ಎಲ್ಲರೂ ಅಭ್ಯಾಸಕ್ಕೆ ಅರ್ಹರು. ಮೇಲೆ ಹೇಳಿದ ನಿದರ್ಶನಗಳಿಂದ ಸ್ತ್ರೀಯರೂ ಯೋಗಾಭ್ಯಾಸವನ್ನು ಮಾಡಬಹುದು ಎಂಬುದು ಸ್ಪಷ್ಟವಾಗುತ್ತದೆ.

ನಮ್ಮ ಪೂರ್ವಿಕರು ಎಲ್ಲಾ ಕೆಲಸ ಕಾರ್ಯಗಳನ್ನೂ ಸ್ವತಃ ತಾವೇ ಮಾಡಿಕೊಳ್ಳುತ್ತಿದ್ದರು. ಬೆಳಗಿನ ಜಾವ ಎದ್ದು ಮನೆಗೆಲಸ, ದನಕರುಗಳ ಕೆಲಸ, ಭತ್ತ ಕುಟ್ಟುವುದು, ಹಿಟ್ಟು ಬೀಸುವುದು, ಊರ

ಹೊರಗಿನ ಹೊಳೆಯಿಂದ ನೀರು ತರುವುದು, ಭಾವಿಯಿಂದ ನೀರು ಸೇದುವುದು ಹೀಗೆ ಎಲ್ಲಾ ಕೆಲಸಗಳನ್ನೂ ಆರಾಮವಾಗಿ ಮಾಡಿ ಕೊಳ್ಳುತ್ತಿದ್ದರು. ಅಲ್ಲದೆ ದೈಹಿಕವಾಗಿ ಬಲಿಷ್ಠರಾಗಿಯೂ, ಮಾನಸಿಕವಾಗಿ ಸ್ಥಿರ ವಾದ ಮನಸ್ಸುಳ್ಳವರಾಗಿಯೂ, ಆತ್ಮಶಕ್ತಿ ಯುಳ್ಳವರಾಗಿಯೂ ಇದ್ದರು. ಒಟ್ಟಿನಲ್ಲಿ ಜೀವನದಲ್ಲಿ ಉತ್ಸಾಹ, ಆಸಕ್ತಿ, ಶಾಂತಿ ಇದ್ದಿತು. ನಿಯಮಿತವಾದ ಜೀವನ ನಡೆ ಸುತ್ತಿದ್ದರು. ಇದು ನಮ್ಮ ಪೂರ್ವಿಕರ ಕಾಲದ, ಅಜ್ಜ, ಅಜ್ಜಿಯರ ಕಾಲದ ಚಿತ್ರ.

ಇಂದು ನಾವು ನಾಗರಿಕರಾಗಿದ್ದೇವೆ. ಪ್ರತಿಯೊಂದು ಕೆಲಸಗಳನ್ನೂ ಯಂತ್ರಗಳ ಮೂಲಕ ಮಾಡಿಸಿಕೊಳ್ಳುತ್ತಿದ್ದೇವೆ. ನಮ್ಮ ಪೂರ್ವಿಕರಿಗೆ ದೊರಕದ ಅನೇಕ ಸೌಲಭ್ಯ ಗಳು ಇಂದು ನಮಗೆ ದೊರೆತಿವೆ. ಆದರೆ ನಮ್ಮ ಪೂರ್ವಜರಲ್ಲಿ ಕಂಡುಬರುತ್ತಿದ್ದ ದೈಹಿಕ ಶಕ್ತಿ, ಮಾನಸಿಕ ದೃಢತೆ, ಅಧ್ಯಾ ತ್ಮಿಕತೆ, ಧಾರ್ಮಿಕತೆ, ನೀತಿ, ನಿಯಮಗಳು ನಮ್ಮಲ್ಲಿ ಬಹುಪಾಲು ಕಡಮೆಯಾಗಿದೆ. ಕಾರಣ ಗಡಿಬಿಡಿ ಜೀವನ, ಯಾಂತ್ರಿಕವಾದ ಜೀವನ ನಮ್ಮ ಮನಸ್ಸಿನ ಮೇಲೆ ದುಷ್ಪರಿ- ಣಾಮ ಉಂಟುಮಾಡುತ್ತಿದೆ. ತನ್ಮೂಲಕ, ದೇಹದ ಮೇಲೆ ಮನಸ್ಸಿನ ಪ್ರಭಾವ ಬೀರುತ್ತಿದೆ. ನಾಗರಿಕತೆ ನಮ್ಮನ್ನು ನಾಜೂಕಾಗಿಸಿದೆ.

ಎಲ್ಲಾ ಕೆಲಸಕಾರ್ಯಗಳನ್ನು ಆಳು, ಕಾಳು, ಅಡಿಗೆಯವರಿಂದ ಮಾಡಿಸಿಕೊಂಡು ಆರಾಮವಾಗಿ, ಯಾವುದೇ ವಿಧವಾದ ದೈಹಿಕ ವಾದ ಚಟುವಟಿಕೆಯಿಲ್ಲದೆ ಇರುವ ಗೃಹಿಣಿ ಯರ ಚಿತ್ರ ಒಂದು ಕಡೆ- ನಿಂತು ಅಡಿಗೆ ಮಾಡುವುದು, ಮೇಜಿನ ಮೇಲೆ ಊಟ ಮಾಡುವ ಏರ್ಪಾಟುಗಳು ; ಸ್ತ್ರೀ ದಿನದ ಬಹುವೇಳೆ ನಿಂತು ಇಲ್ಲವೆ ಓಡಾಟ, ಇಲ್ಲವೆ ಮಲಗಿರುವುದು, ಇಲ್ಲ ಕುರ್ಚಿಯ ಮೇಲೆ ಕುಳಿತು ಕೆಲಸಮಾಡುವಂತೆ ಮಾಡಿದೆ. ಇದರಿಂದ ಅವಳು ಬಾಗಿ ಕೆಲಸಮಾಡುವ, ಎದ್ದು ಕೊಡುವ ಸಂಭವವೇ ಇಲ್ಲ. ಇದ ರಿಂದ ಅವಳ ದೇಹದ ಸ್ನಾಯುಗಳಿಗೆ ಸಾಕಷ್ಟು ವ್ಯಾಯಾಮವಿಲ್ಲದೆ ಬೊಜ್ಜು ಬೆಳೆಯಲು ಅವಕಾಶ ನೀಡುತ್ತದೆ. ಹೆಚ್ಚಿನ ತೂಕದ ಪರಿಣಾಮ ಹೃದಯರೋಗಗಳು, ರಕ್ತದ ಒತ್ತಡ ಮೊದಲಾದ ರೋಗಗಳು ಉಂಟಾಗುತ್ತವೆ.

ಮಧ್ಯಮವರ್ಗಕ್ಕೆ ಸೇರಿದ ಗೃಹಿಣಿಯಾದ ವಳು, ತನ್ನ ಮಕ್ಕಳು ಶಾಲೆಗೆ ಹೋಗುವ ವೇಳೆಗೆ ಅವರ ಊಟ, ತಿಂಡಿ, ಉಡುಪು, ಕೈಚೀಲ, ಪುಸ್ತಕಗಳು ಹೀಗೆ ಎಲ್ಲವನ್ನೂ ನೋಡಿಕೊಳ್ಳಬೇಕು. ಜೊತೆಗೆ ಕಛೇರಿಗೆ ಹೊರಡುವ ಪತಿಗೆ ತಕ್ಕ ಅನುಕೂಲತೆ ಗಳನ್ನು ಒದಗಿಸಬೇಕು. ಇವೆಲ್ಲವೂ ಗಡಿಬಿಡಿಯ ದಿನಚರಿ; ಅವಳ ಮನಸ್ಸಿನ ಮೇಲೆ ದುಷ್ಪರಿಣಾಮವನ್ನುಂಟುಮಾಡು ತ್ತದೆ. ಸಿಟ್ಟು, ಉದ್ವೇಗ, ತಳಮಳ ಇವು ಗಳುಂಟಾಗುತ್ತದೆ. ಮನಸ್ಸಿನ ಸಮತೋಲನ ವನ್ನು ಕಳೆದುಕೊಳ್ಳುತ್ತಾಳೆ. ಅವಳಲ್ಲಿನ ಮಾನಸಿಕ ಉದ್ವೇಗ ದೇಹದ ಮೇಲೆ ಪರಿಣಾಮ ಉಂಟುಮಾಡುತ್ತದೆ. ಅವಳಲ್ಲಿ ರಕ್ತದ ಒತ್ತಡ, ನರಗಳ ದೌರ್ಬಲ್ಯ, ಅಸ್ತಮಾ, ಹೃದಯ ಬೇನೆ ಮೊದಲಾದ ರೋಗಗಳು ಕಾಲಿಡುತ್ತವೆ.

ದುಡಿಯುವ ಮಹಿಳೆಯಾದಲ್ಲಿ ಅವಳ ಪರಿಸ್ಥಿತಿ ಇನ್ನೂ ಕಷ್ಟಕರ. ಮನೆಯಲ್ಲಿನ ಎಲ್ಲ ಕೆಲಸಕಾರ್ಯಗಳನ್ನೂ ಮುಗಿಸಿ, ಬಸ್ಸಿಗೆ ಕಾದು ಕೆಲಸಕ್ಕೆ ಹೋಗಿ ಬರುವ ವೇಳೆಗೆ ಅವಳಿಗೆ ಸಾಕಾಗುತ್ತದೆ. ಮಾನಸಿಕ ಹಾಗೂ ದೈಹಿಕ ಆರೋಗ್ಯ ಕೆಡಲು ಈ ಬಗೆಯ ಯಾಂತ್ರಿಕ ಜೀವನವೂ ಒಂದು ಮುಖ್ಯ ಕಾರಣವಾಗಿದೆ.

ಇವುಗಳೆಲ್ಲ ನಮ್ಮ ನಾಗರಿಕತೆಯ ಕೊಡು ಗೆಯಾಗಿದೆ. ಇದರಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲ. ಬದಲಾಗಿ ಪರಿಸ್ಥಿತಿಗೆ ತಕ್ಕಂತೆ ಸ್ತ್ರೀ ತನ್ನ ದೈಹಿಕ ಹಾಗೂ ಮಾನಸಿಕ ಶಕ್ತಿಗಳನ್ನು ಸಂವರ್ಧನ ಮಾಡಿಕೊಳ್ಳ ಬೇಕು. ದೇಹ ಹಾಗೂ ಮನಸ್ಸು ಆರೋಗ್ಯ ವಾಗಿದ್ದಲ್ಲಿ ಸಹಜವಾಗಿ ಅವಳ ಮನವು ಆಧ್ಯಾತ್ಮದ ಕಡೆಗೆ ಒಲಿಯುತ್ತದೆ. ಚಂಚಲ ವಾದ ಮನಸ್ಸನ್ನು ಹತೋಟಿಗೆ ತಂದು, ಆಧ್ಯಾತ್ಮದ ಕಡೆಗೆ ತಿರುಗಿಸುವುದೇ ಯೋಗ ಮಾರ್ಗ. ಯೋಗದಿಂದ ಭವರೋಗಗಳೆಲ್ಲ ನಾಶವಾಗುತ್ತದೆ. ಯೋಗದಿಂದ ಜ್ಞಾನವು ಲಭಿಸುತ್ತದೆ. ಜೀವನದಲ್ಲಿ ಶಿಸ್ತು, ಸಂಯಮ, ಶಾಂತಿ ಉಂಟಾಗುತ್ತವೆ. ಪೂರ್ಣ ವ್ಯಕ್ತಿತ್ವ ದಲ್ಲಿ ಬದಲಾವಣೆಯುಂಟಾಗುತ್ತದೆ. ಜೀವನ ದಲ್ಲಿ ಉತ್ಸಾಹ, ಆಸಕ್ತಿಗಳು ಮೂಡುತ್ತವೆ. ಯೋಗವೇ ದೇಹಕ್ಕೆ, ಮನಸ್ಸಿಗೆ, ಆತ್ಮಕ್ಕೆ- ಪ್ರಾಚೀನ ಋಷಿಮುನಿಗಳು ನೀಡಿರುವ ಸಂಜೀವಿನಿಯಾಗಿದೆ.

ದೇಹಾರೋಗ್ಯವು ಕೆಡಲು ಇನ್ನೂ ಹಲ ವಾರು ಕಾರಣಗಳಿವೆ:- ಪ್ರತಿಕ್ಷಣವೂ ನಾವು ಉಸಿರಾಡುತ್ತಿರುವ ಗಾಳಿ ವಿಷಮಯವಾಗಿದೆ. ದಿನೇ ದಿನೇ ಬೆಳೆಯುತ್ತಿರುವ ನಗರ ಗಳಿಂದಲೂ, ಕಾರ್ಖಾನೆಗಳಿಂದಲೂ, ವಾಹನ ಸಂಚಾರದಿಂದಲೂ ನಗರಗಳಲ್ಲಿ ಶುದ್ಧವಾದ ಗಾಳಿಯ ಅಭಾವ ಉಂಟಾಗಿದೆ, ಕಾಡು ಗಳನ್ನು ಕಡಿಯುವುದು, ಕಾಲಕಾಲಕ್ಕೆ ಮಳೆ ಯಾಗದೆ ಹವಾಗುಣ ಕಡಲು ಕಾರಣವಾಗಿದೆ. ಈ ಬಗೆಯ ಹವಾಮಲಿನೀಕರಣದಿಂದ ಶ್ವಾಸ ಕೋಶಕ್ಕೆ ಸಂಬಂಧಿಸಿದ ಅನೇಕ ರೋಗಗಳು ಹೆಚ್ಚುತ್ತಿವೆ.

ನಾವು ಸೇವಿಸುತ್ತಿರುವ ಆಹಾರದಲ್ಲಿ ವಿಷ ವಸ್ತುಗಳು ಸೇರಿವೆ ! ಧಾನ್ಯಗಳು, ಹಣ್ಣು ಗಳು, ತರಕಾರಿಗಳು – ಹೀಗೆ ಪ್ರತಿಯೊಂದು ಆಹಾರ ಪದಾರ್ಥಗಳನ್ನು ಬೆಳೆಯಲು ರಾಸಾ ಯನಿಕ ಗೊಬ್ಬರಗಳನ್ನು ಬಳಸಲಾಗುತ್ತಿದೆ. ಅಲ್ಲದೆ ಆಹಾರ ಧಾನ್ಯಗಳು, ತರಕಾರಿ, ಹಣ್ಣುಗಳ ಗಿಡಗಳನ್ನು ಕೀಟಗಳಿಂದ ರಕ್ಷಿಸಲು ಕೀಟನಾಶಕಗಳನ್ನು ಬಳಸಲಾ ಗುತ್ತಿದೆ. ಬೆಳೆದ ಬೆಳೆ ಕೈಗೆ ಬಂದ ನಂತರ ಕೆಡದಂತೆ ರಕ್ಷಿಸಲು ರಾಸಾಯನಿಕಗಳನ್ನು ಬಳಸಲಾಗುತ್ತಿದೆ. ಹೀಗೆ ನಾವು ತಿನ್ನುವ ಆಹಾರಕ್ಕೆ ಪ್ರತಿಯೊಂದು ಹಂತದಲ್ಲೂ ವಿಷ ಮಿಶ್ರಿತವಾಗುತ್ತಿದೆ- ಇದು ಜಠರದ ಮೇಲೆ ಅಪಾರವಾದ ಹಾನಿಯನ್ನುಂಟುಮಾಡಿ. ಅನೇಕ ರೋಗಗಳು ಹರಡಲು ಕಾರಣ ವಾಗಿದೆ.

ಮಾರು ಕಟ್ಟೆಯಲ್ಲಿ ಬರುತ್ತಿರುವ ಸಿದ್ಧ ವಾದ ಆಹಾರವಸ್ತುಗಳು, ಮಕ್ಕಳ ಆಹಾರ

(35 ನೇ ಪುಟ ನೋಡಿ)

# ವೇದಾಂತದೇಶಿಕರ ಶಾಸ್ತ್ರ ಗ್ರಂಥಗಳು

ಡಾ॥ ಎನ್. ಅನಂತರಂಗಾಚಾರ್

ಆಚಾರ್ಯ ಪೀಠವನ್ನಲಂಕರಿಸಿದ್ದ ಶ್ರೀ ವೆಂಕಟನಾಥರಿಗೆ ಭಗವದ್ರಾಮಾನುಜರ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಿರೀಕರಣಮಾಡುವುದು ಆದ್ಯ ಕರ್ತವ್ಯವಾಯಿತು. ಇದಕ್ಕಾಗಿ ಅವರು ಎರಡು ರೀತಿಯಲ್ಲಿ ಕೆಲಸ ಮಾಡಬೇಕಾಯಿತು. ಮೊದಲನೆಯದು ರಾಮಾನುಜಾಚಾರ್ಯರೂ ಇತರ ಹಿರಿಯ ವಿಶಿಷ್ಟಾದ್ವೈತ ಆಚಾರ್ಯರುಗಳೂ ಸೂಕ್ಷ್ಮರೂಪದಲ್ಲಿ ಪ್ರತಿಪಾದಿಸಿದ ತತ್ತ್ವಗಳನ್ನು ವ್ಯಾಖ್ಯಾನ ರೂಪದಲ್ಲಿ ವಿಶದೀಕರಣ ಮಾಡಬೇಕಾಯಿತು. ಅದಕ್ಕಾಗಿ ಅವರು ಅನೇಕ ಪ್ರಾಚೀನ ಗ್ರಂಥಗಳಿಗೆ ಭಾಷ್ಯಗಳನ್ನು ಟೀಕೆಗಳನ್ನು ರಚಿಸಿದ್ದಾರೆ. ಅಲ್ಲದೆ ಹಿಂದಿನಿಂದ ಬೆಳೆದು ಬಂದ ಸಂಪ್ರದಾಯಕ್ಕೆ ಒಂದು ನಿಸ್ಪಷ್ಟ ಆಕಾರವನ್ನು ಕೊಡಬೇಕಾಗಿ ಬಂದಿತು. ಅದಕ್ಕಾಗಿ ಅವರು ಅನೇಕ ರಕ್ಷಾಗ್ರಂಥಗಳನ್ನು ರಚಿಸಿದರು. ಎರಡನೆಯದಾಗಿ ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಆಘಾತರೂಪವಾಗಿ ಅನ್ಯಮತೀಯರು ಅನೇಕ ಖಂಡನಗ್ರಂಥಗಳನ್ನು ರಚಿಸಿದ್ದರು. ಅವರ ಅಭಿಪ್ರಾಯಗಳನ್ನು ಖಂಡನಮಾಡಿ ತಮ್ಮ ತತ್ತ್ವದ ಸ್ಫಟಿಕ ಶುದ್ಧತೆಯನ್ನು ಪ್ರಚಾರಮಾಡಬೇಕಾಯಿತು. ಇದಕ್ಕಾಗಿ ಅವರು ಅನೇಕವಾದ ಗ್ರಂಥಗಳನ್ನೂ ಪ್ರಮೇಯ ಪರಿಷ್ಕಾರ ರೂಪವಾದ ಸ್ವತಂತ್ರಗ್ರಂಥಗಳನ್ನೂ ರಚಿಸಿದ್ದಾರೆ.

ವೇದಾಂತದೇಶಿಕರ ಶಾಸ್ತ್ರಗ್ರಂಥಗಳಲ್ಲಿ ಸುಪ್ರಸಿದ್ಧವಾದುದು 'ಶತದೂಷಣಿ' ಇದು ಶಂಕರ, ಭಾಸ್ಕರ, ಯಾದವರ ದರ್ಶನಗಳ ಖಂಡನಗ್ರಂಥ. ರಾಮಾನುಜರಿಂದ ಉಕ್ತವಾದ ಶಂಕರರ ನಿರ್ವಿಶಿಷ್ಟಾದ್ವೈತದ ಸಪ್ತವಿಧಾನುಪಪತ್ತಿಗಳು ಇಲ್ಲಿ ವಿಸ್ತರಿಸಲ್ಪಟ್ಟಿವೆ. ಇದರ ಹೆಸರೇ ಸೂಚಿಸುವಂತೆ ಇದರಲ್ಲಿ ನೂರೊಂದು ವಾದಗಳಿರಬೇಕು. ಈಗ ಉಪಲಬ್ಧವಾಗಿರುವುವು ೬೬ ಮಾತ್ರ. ಉಳಿದುವು ಮಧ್ವಮತಕ್ಕೆಸಂಬಂಧಪಟ್ಟಿರಬೇಕೆಂದೂ ಅದನ್ನು ದೇಶಿಕರೇ ನಾಶಪಡಿಸಿರಬೇಕೆಂದೂ ಕೆಲವರು ಊಹಿಸುತ್ತಾರೆ. ರಾಮಾನುಜರು ತೋರಿದ ಶಂಕರಾದ್ವೈತದ ಅನುಪಪತ್ತಿಗಳನ್ನು ಆಚಾರ್ಯರು ವಿಸ್ತರಿಸಿ ಆ ದರ್ಶನಭಾಗಗಳನ್ನು ಖಂಡಿಸಿರುವುದಲ್ಲದೆ, ಅದ್ವೈತ ಸನ್ಯಾಸಿಗಳ ಆಚಾರ ವಿಚಾರವಿಮರ್ಶೆಯನ್ನು ಮಾಡಿದ್ದಾರೆ. ಕೊನೆಯದಾದ ಸೂತ್ರಸ್ವಾರಸ್ಯಭಂಗವಾದವು ಶಂಕರರ ಅದ್ವೈತಕ್ಕೂ ಬ್ರಹ್ಮಸೂತ್ರಗಳಿಗೂ ಇರುವ ವಿರೋಧವನ್ನು ಕುರಿತುದು. ಅದೇ ಕೊನೆಯ ವಾದವಿದ್ದರೂ ಇರಬಹುದು, ಆದರೆ 'ಶಾಸಿತಃ ಶತದೂಷಿಣ್ಯಾಂ ಶಂಕರಾದಿ [illegible]ಧಾಗ್ರ್ಯಹಃ' ಎಂಬದಾಗಿ 'ತತ್ತ್ವಟೀಕೆ' ಯಲ್ಲಿ ಅನುವಾದ ಮಾಡಿರುವುದರಿಂದ ನೂರುವಾದಗಳೂ ಸಂಪೂರ್ಣವಾಗಿ ರಚಿತವಾಗಿದ್ದಿರಬೇಕು. ಇಲ್ಲಿ ಆದಿಪದದಿಂದ ಭಾಸ್ಕರ ಯಾದವಪ್ರಕಾಶರ ಗ್ರಹಣವು ಸೂಚಿತವಾಗಿದೆ. ಈಗ ಉಪಲಬ್ಧವಾಗಿರುವುವು ೬೬ ವಾದಗಳು ಮಾತ್ರ. ಈ ಗ್ರಂಥ ರಚನೆಗಾಗಿ ಶ್ರೀ ರಂಗನಾಥನಿಂದ ಆಚಾರ್ಯರಿಗೆ 'ವೇದಾಂತಾಚಾರ್ಯ' ರೆಂಬ ಪ್ರಶಸ್ತಿ ಅನುಗ್ರಹಿಸಲ್ಪಟ್ಟಿತೆಂದು ಸಂಪ್ರದಾಯಯಾಥಾಪ್ರ್ಯಾಯ. 'ಶತದೂಷಣಿ' ಗೂ ಕೃಷ್ಣಮಿಶ್ರರಿಗೂ ಕಲ್ಪಿಸಿರುವ ಸಂಬಂಧ ಐತಿಹಾಸಿಕದೃಷ್ಟಿಯಿಂದ ಅಂಗೀಕಾರಯೋಗ್ಯವಲ್ಲ. ಅದ್ವೈತಕ್ಕೆ ಶ್ರೀಹರ್ಷರ 'ಖಂಡನಖಂಡ ಖಾದ್ಯ' ಹೇಗೋ, ದ್ವೈತಕ್ಕೆ ವ್ಯಾಸರಾಯರ 'ತರ್ಕತಾಂಡವ' ಹೇಗೋ, ಹಾಗೆಯೇ 'ಶತದೂಷಣಿ' ಯು ವಿಶಿಷ್ಟಾದ್ವೈತಕ್ಕೆ ಮುಖ್ಯವಾದ ಗ್ರಂಥ, ಇದಕ್ಕೆ ದೊಡ್ಡಯ್ಯಾಚಾರ್ಯರಿಂದ 'ಚಂಡಮಾರುತ' ವೆಂಬ ಶ್ರೇಷ್ಠವ್ಯಾಖ್ಯಾನವು ರಚಿತವಾಗಿದೆ. 'ವೇದಾಂತವಿಜಯಚಂದ್ರ' ಎಂಬ ದೇಶಿಕರ ವಿಷಯಕವಾದ ಗ್ರಂಥದಲ್ಲಿ 'ಶತದೂಷಣಿ' ಯು ವಿಶೇಷವಾಗಿ ಕೊಂಡಾಡಲ್ಪಟ್ಟಿದೆ. 'ಶತದೂಷಣಿ' ಯನ್ನನುಸರಿಸಿರುವವರನೇಕರುಂಟು. 'ಅದ್ವೈತ ವಿದ್ಯಾವಿಜಯ' ಈ ಮಾದರಿಯದು. ಶ್ರೀನಿವಾಸರೆಂಬುವರಿಂದ ರಚಿತವಾದ' ಬ್ರಹ್ಮಜ್ಞಾನ ನಿರಾಸದಲ್ಲಿ 'ಶತದೂಷಣಿ'ಯ ಮಾರ್ಗವನ್ನನುಸರಿಸಿರುವುದಲ್ಲದೆ, ಇಲ್ಲಿ ಉಕ್ತವಾಗಿರುವ ಅನೇಕ ಅಂಶಗಳು ಚರ್ಚಿಸಲ್ಪಟ್ಟಿವೆ. ಇದಕ್ಕೆ ನೃಸಿಂಹದೇವನ 'ನೃಸಿಂಹರಾಜೀಯ', 'ನಿಕ್ಷೇಪರಕ್ಷಾ' ವ್ಯಾಖ್ಯಾನಕಾರರಾದ ಶ್ರೀನಿವಾಸಾಚಾರ್ಯರ 'ಸಹಸ್ರಕಿರಣ' ಎಂಬ ವ್ಯಾಖ್ಯಾನಗಳಿವೆ.

ತತ್ತ್ವಮುಕ್ತಾಕಲಾಪ : ಇದು ಅಯ್ದುನೂರು ಮುತ್ತುಗಳ ಅಯ್ದುಸರಗಳಿಂದ ಕೂಡಿದ ಪದ್ಯ ಗ್ರಂಥ. ವೇದಾಂತ ದೇಶಿಕರ ಪರಮೋತ್ತಮ ಪ್ರಮಾಣಗ್ರಂಥವೂ ಅಹುದು. ಆದುದರಿಂದಲೇ ಮಾಧವಾಚಾರ್ಯರ 'ಸರ್ವದರ್ಶನ ಸಂಗ್ರಹ'ದಲ್ಲಿ ಇದರ ಅನೇಕ ಅನುವಾದಗಳಿವೆ. ಇದು ಇದೇ ಮಾದರಿಯ ಯಾಮುನಾಚಾರ್ಯರ 'ಸಿದ್ಧಿತ್ರಯ ಮತ್ತು ಲೋಕಾಚಾರ್ಯರ 'ತತ್ತ್ವತ್ರಯ' ಗಳನ್ನೂ ತನ್ನ ವಿಸ್ತಾರವಾದ ವಿವರಣೆಯಿಂದಲೂ ತರ್ಕಬದ್ಧವಾದ ಸಿದ್ಧಾಂತದಿಂದಲೂ ಹಿಂದೆ ಹಾಕಿದೆ. ಇದರ ಕಾವ್ಯಮಯವಾದ ಶೈಲಿಯು ಹೃದಯಂಗಮವಾಗಿದೆ

ಜಡದ್ರವ್ಯಸರ, ಜೀವಸರ, ನಾಯಕಸರ, ಬುದ್ಧಿಸರ ಮತ್ತು ಅದ್ರವ್ಯಸರ ಇದರ ಅಯ್ದು ಭಾಗಗಳು. ಮಧ್ಯದ ನಾಯಕಸರವು ಬಹು ಆಕರ್ಷಣೀಯವಾಗಿದೆ. ಈ ಗ್ರಂಥವನ್ನು ರಾಮಾನುಜ ದರ್ಶನದ ಪ್ರಧಾನ ಕೈಪಿಡಿಯೆಂದು ಕರೆಯಬಹುದು. ಇದರ ಟೀಕೆಯಾದ ನೃಸಿಂಹ ದೇವನ 'ಆನಂದದಾಯಿನಿಯು, ಶ್ರೀ ಪರಕಾಲ ಸ್ವಾಮಿಗಳವರ 'ಭಾವಪ್ರಕಾಶ' ದೊಡನೆ ಪ್ರಕಾಶಿತವಾಗಿವೆ

'ಸರ್ವಾರ್ಥಸಿದ್ಧಿ :– ಇದು ವೇದಾಂತದೇಶಿಕರಿಂದಲೇ ರಚಿತವಾದ ಮೇಲಿನ ಗ್ರಂಥದ ವ್ಯಾಖ್ಯಾನ. ಈ ವ್ಯಾಖ್ಯಾನವಿಲ್ಲದಿದ್ದರೆ 'ತತ್ತ್ವಮುಕ್ತಾಕಲಾಪ'ವನ್ನು ಅರ್ಥಮಾಡಿಕೊಳ್ಳಲು ಕಷ್ಟವಾಗುತ್ತಿತ್ತು. ಆಚಾರ್ಯರ ಆಳವಾದ ಪಾಂಡಿತ್ಯ, ವಿಮರ್ಶನ ಚಾತುರ್ಯ, ಸರಸ ಮನೋಭಾವ, ಕವಿತ್ವಶೈಲಿ ಮೊದಲಾದುವು ಇಲ್ಲಿ ಪ್ರಕಾಶಿತವಾಗಿವೆ. ಇಲ್ಲಿಯೂ ಕೂಡ ಪ್ರಕಾಶಾತ್ಮ, ವಾಚಸ್ಪತಿ, ಚಿತ್ಸುಖಾದಿಗಳಿಂದ ಅಭಿಹಿತವಾದ ನಿರ್ವಿಶಿಷ್ಟಾದ್ವೈತ ಸಂಬಂಧವಾದ ಅನೇಕವಾದಗಳು ಅನುವಾದಿತವಾಗಿ ನಿರಾಕೃತವಾಗಿವೆ.

ಅಧಿಕರಣಸಾರಾವಳಿ :– ಇದು ಭಗವದ್ರಾಮಾನುಜರ ಶ್ರೀ ಭಾಷ್ಯಾನುಸಾರ 'ಬ್ರಹ್ಮಸೂತ್ರ'ದ ವಿವಿಧ ಅಧಿಕರಣಗಳ ಪದ್ಯಸಂಗ್ರಹ. ನಾಲ್ಕು ಅಧ್ಯಾಯಗಳಾಗಿ ವಿಭಾಗವಾಗಿದೆ. ೫೬೩ ಶ್ಲೋಕ ಸಂಖ್ಯೆಯನ್ನುಳ್ಳದ್ದಾಗಿದೆ. ಅವರ 'ತತ್ತ್ವಟೀಕೆ'ಗಿಂತ ಮೊದಲೇ ರಚಿತವಾದುದು. ಅದರ ಛಂದೋಬದ್ಧವಾದ ಸಾರಸಂಗ್ರಹದಂತೆಯೇ ಇದೆ. 'ತತ್ತ್ವಮುಕ್ತಾಕಲಾಪ' ದಲ್ಲಿ ಕಂಡುಬರುವ ಆವರ ಸ್ರಗ್ಧರಾವೃತ್ತ ರಚನೆಯ ಅದ್ಭುತಶಕ್ತಿ ಇಲ್ಲಿ ಮತ್ತೂ ವೈಭವಯುಕ್ತವಾಗಿ ಕಾಣುತ್ತದೆ. ಇಲ್ಲಿ ಶ್ರೀ ಭಾಷ್ಯವು ಅಧ್ಯಾಯಾನುಗುಣವಾಗಿ, ವಿಷಯಾನುಗುಣವಾಗಿ, ಪ್ರಕರಣಾನುಗುಣವಾಗಿ ರಚಿತವಾಗಿದ್ದರೂ ಇದು ಅದರ ಸಂಗ್ರಹಮಾತ್ರವೇ ಅಲ್ಲ. ರಾಮಾನುಜ ಸಿದ್ಧಾಂತಕ್ಕೆ ಅಪೂರ್ವ ಕಾಣಿಕೆಯಾಗಿದೆ. ಶ್ರೀಭಾಷ್ಯದಲ್ಲಿ ಪ್ರಪನ್ನನು ಮೋಕ್ಷಕ್ಕೆ ಅಧಿಕಾರಿಯೆಂಬು

ದನ್ನು ಸ್ಪಷ್ಟವಾಗಿ ಹೇಳಿಲ್ಲ. ಅಲ್ಲದೆ ಬ್ರಹ್ಮಸೂತ್ರದ ಕೊನೆಯ ಸೂತ್ರಕ್ಕೆ ವ್ಯಾಖ್ಯಾನಮಾಡುತ್ತ ಪ್ರಪತ್ತಿಯೊಂದೇ ಮೋಕ್ಷಸಾಧನವೆಂದೂ ಶ್ರೀ ಭಾಷ್ಯಕಾರರು ಸ್ಪಷ್ಟಪಡಿಸಿಲ್ಲ. ದೇಶಿಕರು ಅವರ 'ಶರಣಾಗತಿಗದ್ಯ'ದ ಆಧಾರದ ಮೇಲೆ ಪ್ರಪನ್ನನೇ ಮೋಕ್ಷಾಧಿಕಾರಿಯೆಂದೂ (ಉತ್ತಮಾರ್ಥಿ) ಪ್ರಪತ್ತಿಯೊಂದೇ ಈಶ್ವರ ಸಾಕ್ಷಾತ್ಕಾರಕ್ಕೆ ಏಕೈಕ ಸಾಧನವೆಂದೂ ಸಿದ್ಧಾಂತ ಮಾಡಿದ್ದಾರೆ. ಇಲ್ಲಿ 'ಶ್ರೀನ ದೇವೇನ ದತ್ತಂ ವೇದಾಂತಾಚಾರ್ಯ ಸಂಜ್ಞಾಮವಹಿತ ಬಹುವಿಶ್ವಾರ್ಥಮನ್ವರ್ಥಯಾಮಿ' ಎಂಬುದಾಗಿ ತಮ್ಮ ವೇದಾಂತಾಚಾರ್ಯರೆಂಬ ಪ್ರಶಸ್ತಿಯನ್ನು ಅನುವಾದಮಾಡಿರುವುದರಿಂದ 'ಶತದೂಷಣಿ' ಯನ್ನು ರಚಿಸಿದ ಮೇಲೆಯೇ ಇದನ್ನು ರಚಿಸಿರಬೇಕು. ಅಲ್ಲದೆ ಇಲ್ಲಿ ತತ್ತ್ವಮುಕ್ತಾಕಲಾಪ' ದ ನಿರ್ದೇಶನವಿರುವುದರಿಂದ ಅದಾದ ಮೇಲೆಯೇ ಇದು ರಚಿತವಾಗಿರಬೇಕು. ಅಲ್ಲದೇ ಶ್ರೀರಂಗದಲ್ಲಿಯೇ ರಚಿತವಾಗಿದ್ದಿರಬೇಕು. ಇದಕ್ಕೆ ಕುಮಾರವರದಾಚಾರ್ಯರ 'ಅಧಿಕರಣ ಚಿಂತಾಮಣಿ' ಯೆಂಬ ವ್ಯಾಖ್ಯಾನವೂ ಅತ್ತಿಪಟ್ಟು ಶಠಕೋಪ ರಾಮಾನುಜರ 'ಅಧಿಕರಣ ಕಲ್ಪತರು' ಎಂಬ ವ್ಯಾಖ್ಯಾನವೂ ಇದೆ.

ಅಧಿಕರಣದರ್ಪಣಮ್: ಈಗ ಇದು ಉಪಲಬ್ಧವಿಲ್ಲ. 'ನಿಕ್ಷೇಪರಕ್ಷೆ'ಯಲ್ಲಿ ಉದ್ಧೃತವಾಗಿದೆ. ವಿಶಿಷ್ಟಾದ್ವೈತಸಿದ್ಧಾಂತರೀತ್ಯಾ ಬ್ರಹ್ಮಸೂತ್ರಗಳ ಅಧಿಕರಣಗಳ ಸಂಗ್ರಹ ಪ್ರತಿಪಾದನವಿರಬೇಕು. 'ಅಧಿಕರಣಸಾರಾವಳಿ'ಯ ಮಾದರಿಯೆಂದು ದೇಶಿಕರೇ ಹೇಳಿದ್ದಾರೆ.

ನ್ಯಾಯಪರಿಶುದ್ಧಿ :— ಇದರಲ್ಲಿ ಆಚಾರ್ಯರು ಪ್ರಾಚೀನ ನ್ಯಾಯ ವಿಸ್ತಾರಕ್ಕೆ ಹೊಸರೂಪವನ್ನು ಕೊಟ್ಟು ವಿಶಿಷ್ಟಾದ್ವೈತ ದರ್ಶನದಲ್ಲಿ ಅದರ ಪ್ರಾಮುಖ್ಯವನ್ನು ವಿಶದಪಡಿಸಿದ್ದಾರೆ. ಇದರಲ್ಲಿ ಐದು ಅಧ್ಯಾಯಗಳಿವೆ, ಒಂದನೆಯ ಅಧ್ಯಾಯದಲ್ಲಿ ಪ್ರಮಾಣನಿರೂಪಣೆಯಿದೆ. ಎರಡನೆಯದರ ಮೊದಲನೆಯ ಭಾಗದಲ್ಲಿ ಅನುಮಾನದ ವ್ಯಾಪ್ತಿ ಮತ್ತು ಅವ್ಯಾಪ್ತಿಗಳ ವಿವರಣೆಯಿದೆ. ಭಾಸರ್ವಜ್ಞ ಮತ್ತು ವರದರಾಜರ ಪ್ರಭಾವವನ್ನು ಇಲ್ಲಿ ಕಾಣಬಹುದು. ಎರಡನೆಯ ಅಧ್ಯಾಯದ ಎರಡನೆಯ ಭಾಗದಲ್ಲಿ ಪರಾರ್ಥಾನುಮಾನದ ಖಂಡನೆಯಿದೆ. ಮೂರನೆಯ ಭಾಗವು ಜಾತಿ ವಿಷಯಕವಾದುದು. ನಾಲ್ಕನೆಯ ಭಾಗವು ಪ್ರಮಾಣಾಭಾಸಗಳನ್ನು ಕುರಿತುದು. ಮೂರನೆಯ ಅಧ್ಯಾಯದ ಮೊದಲನೆಯ ಭಾಗವು ಶಬ್ದಪ್ರಮಾಣವನ್ನು ಕುರಿತುದು. ಎರಡನೆಯದರಲ್ಲಿ ವೈದಿಕಪ್ರಮಾಣವು ಅದರ ವಿಧಿ ಮತ್ತು ಅರ್ಥವಾದಗಳ ವಿಭಾಗಗಳಲ್ಲಿ ಉಕ್ತವಾಗಿವೆ. ನಾಲ್ಕನೆಯದು ಸ್ಮೃತ್ಯಧ್ಯಾಯ. ವೇದಾಂತ ದೇಶಿಕರಿಗಿಂತ ಹಿಂದೆ ಪ್ರಾಚೀನನ್ಯಾಯ ಮತ್ತು ವಿಶಿಷ್ಟಾದ್ವೈತದರ್ಶನ ಸಮನ್ವಯಕ್ಕೆ ಅನೇಕರು ಶ್ರಮಿಸಿದ್ದರು. ನಾಥಮುನಿಗಳೇ ಅವರಲ್ಲಿ ಆದ್ಯರು. ಅವರ 'ನ್ಯಾಯತತ್ತ್ವವೇ' ಆ ಶಾಖೆಯ ಮೊದಲ ಗ್ರಂಥ. ಸಾಂಪ್ರದಾಯಕ ನೈಯಾಯಿಕರು ಪ್ರಮಾಣ ಮೀಮಾಂಸೆಯಲ್ಲಿಯೇ ಕೃತಕೃತ್ಯರಾದರು. ವಿಶಿಷ್ಟಾದ್ವೈತಶಾಸ್ತ್ರಕರು ಪ್ರಮಾಣಗಳನ್ನು ಪ್ರಮೇಯ ಪರಿಷ್ಕಾರಕ್ಕೆ ಉಪಯೋಗಿಸಿಕೊಂಡರು. ಉದ್ಯೋತಕರನು ನ್ಯಾಯಶಾಸ್ತ್ರವನ್ನು ಬೌದ್ಧರ ಆಘಾತದಿಂದ ಉದ್ಧಾರಮಾಡಿದನು. ವಿಶಿಷ್ಟಾದ್ವೈತಿಗಳು ನ್ಯಾಯದ ಜಗತ್ಸತ್ಯವಾದವನ್ನು ಅದ್ವೈತಿಗಳ ಆದರ್ಶವಾದದಿಂದ ಸಂರಕ್ಷಿಸಿದರು. ನಾಥಮುನಿಗಳಿಗೂ ವೇದಾಂತ ದೇಶಿಕರಿಗೂ ಮಧ್ಯೆ ಈ ತೆರನಾದ ಕಾರ್ಯ ವಿಶೇಷವಾಗಿ ನಡೆದಿದೆ. ಅವೆಲ್ಲ ಈಗ ನಾಶವಾಗಿವೆ. ಪರಾಶರಭಟ್ಟರ 'ತತ್ತ್ವರತ್ನಾಕರ', ನಾರಾಯಣ ಮುನಿಗಳ 'ನ್ಯಾಯಸುದರ್ಶನ' ಮತ್ತು 'ಪ್ರಜ್ಞಾ ಪರಿತ್ರಾಣ' ವಿಷ್ಣುಚಿತ್ತ ಮತ್ತು ವರದವಿಷ್ಣುರ ಗ್ರಂಥಗಳು ಇಂತಹವು. ಇವುಗಳ ವಿಷಯವಾಗಿ 'ನ್ಯಾಯಪರಿಶುದ್ಧಿ' ಯಲ್ಲಿ ಅನುವಾದವಾಗಿರುವ ಭಾಗ ವಿನಾ ಇನ್ನೇನೂ ತಿಳಿಯದು. ಬಹುಶಃ 'ನಾಯಪರಿಶುದ್ಧಿ' ಯಿಂದ ಹಿಂದೆ ಬಿದ್ದು ಹೋದವೇನೋ.

ನ್ಯಾಯದರ್ಶನದಲ್ಲಿ 'ನ್ಯಾಯವಾರ್ತಿಕ ತಾತ್ಪರ್ಯಪರಿಶುದ್ಧಿ'ಯು ಆಕ್ರಮಿಸಿರುವ ಸ್ಥಾನವನ್ನು ರಾಮಾನುಜ ದರ್ಶನದಲ್ಲಿ 'ನ್ಯಾಯಪರಿಶುದ್ಧಿ'ಯು ಆಕ್ರಮಿಸಿದೆ. ವೇದಾಂತದೇಶಿಕರೇ ಇದನ್ನು 'ಪಂಡಿತಕೃತ್ಯ' ವೆಂದು ಕರೆದಿದ್ದಾರೆ. ನ್ಯಾಯ ಮತ್ತು ವೇದಾಂತ ಪಂಥಗಳ ಸಿದ್ಧಾಂತ ಸಮನ್ವಯ ದೃಷ್ಟಿಯಿಂದ ಬಹು ಉತ್ತಮವಾದ ಗ್ರಂಥ, ಸಂಗ್ರಹವಾಗಿ ಹೇಳುವುದಾದರೆ ಗೌತಮೀಯ ನ್ಯಾಯಸೂತ್ರಗಳು ವೇದಾಂತಸಮಯ ಬಹಿಷ್ಕಾರಪಕ್ಷಗಳಲ್ಲಿ ಪರಿಗಣಿತವಾಗಿದ್ದರೆ ಅವು ಅಬಹಿಷ್ಕಾರವಾದುವೆಂದು ಸ್ಥಾಪಿಸುವುದು ಸಾಧ್ಯವಿದೆಯೆಂದು ಪ್ರತಿಜ್ಞೆಮಾಡಿ ಅಲ್ಲಿರುವ ಪ್ರತ್ಯಕ್ಷಾನುಮಾನಾದಿ ವಿಚಾರಪರಗಳಾದ ಸೂತ್ರಗಳು ವೇದಾಂತಸಮಯಾನುಕೂಲ್ಯದಿಂದ ಇಲ್ಲಿ ಅರ್ಥವರ್ಣನೆ ಮಾಡಲ್ಪಟ್ಟಿವೆ. 'ಪಾಂಚರಾತ್ರ ರಕ್ಷೆ'ಯ ಹೆಸರು ಇಲ್ಲಿ ನಿರ್ದೇಶವಾಗಿದೆ.

ನ್ಯಾಯಸಿದ್ಧಾಂಜನ :— ಇದು 'ನ್ಯಾಯಪರಿಶುದ್ಧಿ'ಯ ಕೊನೆಯ ಪರಿಚ್ಛೇದದಲ್ಲಿ ಸಂಗ್ರಹವಾಗಿ ನಿರ್ದಿಷ್ಟವಾದ ಪ್ರಮೇಯ ತತ್ತ್ವವನ್ನು ವಿಸ್ತಾರವಾಗಿ ವಿಚಾರಮಾಡುತ್ತದೆ. ಇದರಲ್ಲಿ ಜಡದ್ರವ್ಯ, ಈಶ್ವರ, ನಿತ್ಯವಿಭೂತಿ, ಬುದ್ಧಿ ಮತ್ತು ಅದ್ರವ್ಯ ಸಂಜ್ಞಕಗಳಾದ ಆರು ಪರಿಚ್ಛೇದಗಳಿವೆ. ಆರನೆಯ ಪರಿಚ್ಛೇದದ ಮುಂದೆ ನಿಂತು ಹೋಗಿದೆ ಇಲ್ಲಿ ವರದವಿಷ್ಣುಮಿಶ್ರರ ನ್ಯಾಯ ವೈಶೇಷಿಕಪಂಥವು ಖಂಡಿತವಾಗಿದೆ. 'ತಾತ್ಪರ್ಯ ಚಂದ್ರಿಕೆ'ಯು ಇಲ್ಲಿ ನಿರ್ದಿಷ್ಟವಾಗಿದೆ. ಇದರ 'ರಂಗರಾಮಾನುಜಭಾಷ್ಯ' ವು ಬೋಧಪ್ರದವಾಗಿದೆ.

ಸಚ್ಚರಿತ್ರರಕ್ಷಾ :— ಇದರಲ್ಲಿ ಶ್ರೀ ವೈಷ್ಣವ ಸಮಯಸಿದ್ಧವಾದ ಸುದರ್ಶನ ಪಾಂಚಜನ್ಯ ಧಾರಣ, ದ್ವಾದಶೋರ್ಧ್ವಪುಂಡ್ರಧಾರಣ, ಭಗವನ್ನಿವೇದಿತವಾದುವುಗಳ ವೈವಿಧತೆ ಮತ್ತು ನಿರವದ್ಯತೆ, ಭಗವತ್ಪ್ರೀಣನತಾ ಮೊದಲಾದುವು ಕ್ರಮವಾಗಿ ಮೂರು ಅಧಿಕಾರಗಳಲ್ಲಿ ನಿರೂಪಿತವಾಗಿವೆ. ಇವುಗಳಿಗೆ ಪ್ರಮಾಣರೂಪವಾಗಿ ಶ್ರುತಿಸ್ಮೃತಿ ಪುರಾಣವಚನಗಳು ಪ್ರದರ್ಶಿತವಾಗಿವೆ. ಆರಂಭದಲ್ಲಿ ದೇಹಳೀಶರ ಪ್ರಾರ್ಥನೆಯಿರುವುದರಿಂದ ತಿರುಕ್ಕೋಯಿಲೂರಿನಲ್ಲಿ ರಚಿತವಾಗಿರಬಹುದು.

ನಿಕ್ಷೇಪರಕ್ಷಾ :— ನಿಕ್ಷೇಪ, ಪ್ರಪತ್ತಿ, ಶರಣಾಗತಿ, ನ್ಯಾಸ ಮೊದಲಾದುವೆಲ್ಲ ಏಕಾರ್ಥಸೂಚಿಯಾದ ಪರ್ಯಾಯಪದಗಳು. 'ನಿಕ್ಷೇಪರಕ್ಷೆ' ಯು ಅದರ ಹೆಸರೇ ಸೂಚಿಸುವಂತೆ ಮೋಕ್ಷಸಾಧನೋಪಾಯಗಳಲ್ಲಿ ಪ್ರಪತ್ತಿಯೇ ಪರಮೋತ್ತಮ ಸಾಧನವೆಂದು ಸಾರಿಹೇಳುವ ಉದ್ದಾಮಗ್ರಂಥ. ದೇಶಿಕರನ್ನು ಚಿರಸ್ಥಾಯಿಯನ್ನಾಗಿಸುವುದಕ್ಕೆ ಇದೊಂದೇ ಗ್ರಂಥ ಸಾಕು. ಇಲ್ಲಿ ದಿವ್ಯಜ್ಞಾನದ ಪರಮರಹಸ್ಯವನ್ನು ಆಚಾರ್ಯರು ವಿಶದೀಕರಿಸಿದ್ದಾರೆ. ದೇವರಲ್ಲಿ, ಮನುಷ್ಯರಲ್ಲಿ, ಪ್ರಕೃತಿಯಲ್ಲಿ ಏಕರೀತಿಯಾದ ಪ್ರೇಮವನ್ನು ಬೆಳೆಸುವುದೇ ಅದು. ಶ್ರುತ್ಯಾದಿ ಪ್ರಮಾಣೋಪನ್ಯಾಸಪೂರ್ವಕ ನಿಕ್ಷೇಪದ ಬ್ರಹ್ಮವಿದ್ಯಾತ್ವವನ್ನು ಇಲ್ಲಿ ವ್ಯವಸ್ಥಾಪನೆ ಮಾಡಿದ್ದಾರೆ. ಅಲ್ಲದೆ ನಿಕ್ಷೇಪವು, ಬ್ರಹ್ಮನಲ್ಲಿ ತನ್ನನ್ನು ಪ್ರೇಮಭಕ್ತಿಗಳಿಂದ ಸಮರ್ಪಣೆಮಾಡಿಕೊಂಡಿರುವುದನ್ನು ಅನವರತವೂ ಸ್ಮೃತಿಪಥದಲ್ಲಿ ತರುವುದೆಂದೂ, ಏಕೈಕಧ್ಯೇಯ ವಸ್ತುವಾದ ಭಗವಂತನನ್ನು ತನ್ನ ಕಡೆಗೆ ಸೆಳೆಯುವ ಸಾಧನವೆಂದೂ, ಔಪನಿಷದಿಕ ಸಾಧನ ಸಂಭಾವನೆಯುಳ್ಳದ್ದೆಂದೂ, ಗೀತೋಕ್ತವಾದ ಮಾರ್ಗದಿಂದ ಕೂಡಿದುದೆಂದೂ,ಆತ್ಮನಿವೇದನ ಮೀಮಾಂಸೆಯೆಂದೂ, ಪೂರ್ವಮೀಮಾಂಸಾಸಾಧನವು ತನ್ನ 'ಅಪೂರ್ವ' ದಿಂದ ಸಂಪೂರ್ಣತೆಯನ್ನು ಪಡೆಯುವಂತೆ, ನಿಕ್ಷೇಪ ಮೀಮಾಂಸಾ ಸಾಧನವು ತನ್ನ 'ಅಪೂರ್ವ'ವನ್ನು ದೇಹಪ್ರಸಾದ ಅಥವಾ ಭಗವಂತನ ಅನುಕೂಲ ಸಂಕಲ್ಪರೂಪದಲ್ಲಿ ಸಿದ್ಧಿ ಪಡೆಯುವುದೆಂದೂ, ಅದು ಶಾಸ್ತ್ರವಿರುದ್ಧವಲ್ಲವೆಂದೂ,ಭಕ್ತಿಭಿನ್ನವಾದು

(32 ನೇ ಪುಟ ನೋಡಿ)

# ಶ್ರೀ ವಿಜಯದಾಸರು

ಕ್ರಿ. ಶ. ೧೬ನೆಯ ಶತಮಾನವನ್ನು ದಾಸ ಸಾಹಿತ್ಯದ ಸುವರ್ಣಯುಗವನ್ನಾಗಿಸಿದವರು ಶ್ರೀ ಪುರಂದರದಾಸರಾದರೆ, ಅವರ ಶಿಷ್ಯರಾದ ಶ್ರೀ ವಿಜಯದಾಸರು ೧೮ನೆಯ ಶತಮಾನದಲ್ಲಿ ಉದಯಿಸಿ ಅದುವರೆಗೆ ಯಾವ ಹರಿದಾಸರೂ ಮಾಡದ ಕಾರ್ಯವನ್ನು ಅತ್ಯಂತ ಶ್ರದ್ಧೆಯಿಂದ ಕನ್ನಡ ಜನತೆಯ ಉದ್ಧಾರ ದೃಷ್ಟಿಯಿಂದ ಅಮೂಲ್ಯ ಸೇವೆಯನ್ನು ಮಾಡಿ ದ್ವಿತೀಯ ಪುರಂದರದಾಸರೆಂದೂ, ಹರಿದಾಸ ಸಾಹಿತ್ಯದ ದ್ವಿತೀಯ ಘಟ್ಟದ ದಾಸ ಪರಂಪರೆಯ ಮಾರ್ಗದರ್ಶಿಗಳೆಂದೂ, ಸುಳಾದಿದಾಸರೆಂದೂ ಭೃಗು ಮಹರ್ಷಿಯ ಅಂಶ ಸಂಭೂತರೆಂದೂ ಪ್ರಸಿದ್ಧರಾಗಿರುವರು.

ಕ್ರಿ. ಶ. ೧೬೮೨ ರಲ್ಲಿ ರಾಯಚೂರು ಜಿಲ್ಲೆ ಮಾನವಿ ತಾಲೂಕಿಕ ಚೀಕನಪರವಿ ಎಂಬ ಹಳ್ಳಿಯಲ್ಲಿದ್ದ ಶ್ರೀನಿವಾಸಪ್ಪ ಕೂಸಮ್ಮ ಎಂಬ ಮಾಧ್ವ ಬ್ರಾಹ್ಮಣ ದಂಪತಿಗಳು ಅಶ್ವತ್ಥ ನಾರಸಿಂಹನ ಕೃಪೆಯಿಂದ ಗಂಡುಮಗುವೊಂದನ್ನು ಪಡೆದರು. ಆ ತಾಯ್ತಂದೆಗಳ ಹರಿಭಕ್ತಿ ಭಾವ ಪಾರಮ್ಯವೇ ಆ ಜ್ಯೇಷ್ಠ ಪುತ್ರನಿಗೆ 'ದಾಸಪ್ಪ' ಎಂದು ನಾಮಕರಣ ಮಾಡಿಸಿತು.

ದಾಸಪ್ಪನ ಬಾಲ್ಯ ಬಹಳ ಬಡತನದಲ್ಲಿ ಕಳೆಯಿತು. 'ಸಂಜೆತನಕ ದುಡಿದರೂ ಸಣ್ಣ ಸೌಟಿನ ತುಂಬ ಗಂಜಿ' ಕಾಣುತ್ತಿರಲಿಲ್ಲ; ಜೀರ್ಣ ಮಲಿನ ವಸ್ತ್ರವನ್ನುಟ್ಟು ಬಾಳನ್ನು ನೂಕಬೇಕಾಗಿತ್ತು. ಮನೆ ಮನೆ ತಿರುಗಿದರು ಕಾಸು ಹುಟ್ಟದೆ ಬಳಲುವಂತಾಯಿತು. ದಾಸಪ್ಪನಿಗೆ ಸಕಾಲದಲ್ಲಿ ಬ್ರಹ್ಮೋಪದೇಶವೂ, ಅಂದಿನ ಸಂಪ್ರದಾಯದಂತೆ ಅರಳಮ್ಮನೆಂಬ ಕನ್ಯೆಯೊಡನೆ ವಿವಾಹವೂ ನೆರವೇರಿತು. ಆದರೆ ದಾರಿದ್ರ್ಯವು ಮಾತ್ರ ಪರಿಹಾರವಾಗಲಿಲ್ಲ. ಈ ಒಡತನದ ರೋಗಕ್ಕೆ ಮದ್ದು ಕಂಡು ಹಿಡಿಯಲೆಂದು ದಾಸಪ್ಪ ಒಂದು ದಿನ 'ಹಿರಿಯರಿಗೆ ಪೇಳದಲೆ' ಗಂಗಾಭಿಮುಖನಾಗಿ ಯಾತ್ರೆಗೆ ಹೊರಟು ಬಿಟ್ಟನು. 'ರಾಮೇಶ್ವರಕ್ಕೆ ಹೋದರೂ ಶನೇಶ್ವರ ಬಿಡ' ಎಂಬಂತೆ ದಾಸಪ್ಪನನ್ನು ದಾರಿಯಲ್ಲಿ ಕಳ್ಳರು ಹಿಡಿದು ಅವನಲ್ಲಿದ್ದ ವಸ್ತ್ರಗಳನ್ನು ಅಪಹಾರ ಮಾಡಿ ಘಾಸಿಸಿದರು. ದಾಸಪ್ಪನಿಗೆ ದಾರಿಯಲ್ಲಿ ಭಕ್ತರ ಗುಂಪೊಂದು ಸಿಕ್ಕಿತು. ಅವರೊಡನೆ ಇವನೂ ಸೇರಿ ಹರಿಭಜನೆಯನ್ನು ಮಾಡುತ್ತಾ ಕಾಶಿಯಾತ್ರೆ ಮಾಡಿ ರಾಮೇಶ್ವರಾಭಿಮುಖವಾಗಿ ಯಾತ್ರೆಯನ್ನು ಬೆಳೆಸಿದನು. ಊರಿಂದ ಊರಿಗೆ ತೆರಳುತ್ತಾ ಚೀಕನ ಪರವಿಗೆ ಭಕ್ತ ಸಮೂಹದೊಡನೆ ಬಂದ ದಾಸಪ್ಪನನ್ನು ಬಂಧು ಬಾಂಧವರು ಗುರುತು ಹಿಡಿದು ಮನೆಯಲ್ಲಿರಿಸಿಕೊಂಡರು. ಹೀಗೆ ಅನಿರೀಕ್ಷಿತವಾಗಿ ದಾಸಪ್ಪ ಮನೆ ಸೇರಿದನು.

ದಾಸಪ್ಪನ ಮನಸ್ಸು ಆಗ ತೀರ್ಥಸ್ನಾನ ಮತ್ತು ಕ್ಷೇತ್ರಮೂರ್ತಿ ದರ್ಶನಗಳಿಂದ ಪವಿತ್ರವಾಗಿತ್ತು. ತಾಯ್ತಂದೆಗಳ ಶುಶ್ರೂಷೆ ಮಾಡುತ್ತಾ ಜೀವನೋಪಾಯಕ್ಕಾಗಿ ಹದಿನೆಂಟು ಗ್ರಾಮಗಳ ತೆರಿಗೆಯನ್ನು ವಸೂಲು ಮಾಡಿ ಸರ್ಕಾರಕ್ಕೆ ಒಪ್ಪಿಸುವ ಗುತ್ತಿಗೆ ಕೆಲಸವನ್ನು ವಹಿಸಿಕೊಂಡನು. ಈ ಕಾರ್ಯ ಹನ್ನೆರಡು ವರ್ಷಗಳವರೆಗೆ ನಿರಾತಂಕವಾಗಿ ಸಾಗಿತು. ಆದರೆ ವಿಧಿ ಇವನಿಂದ ಮಹತ್ತರ ಕಾರ್ಯವನ್ನು ನೆರವೇರಿಸಲು ಅದಕ್ಕೆ ಆತಂಕವನ್ನು ಒಡ್ಡಿತು. ಜನ ಹಣವನ್ನು ಸರಿಯಾಗಿ ಕೊಡದೆ ಮೋಸ ಮಾಡಿದರು. ದಾಸಪ್ಪನ ಕೈಯ್ಯಲ್ಲಿದ್ದ ಹಣವೆಲ್ಲಾ ಜಾರಿತು. ಒಂದು ಕಡೆ ಗೌರವದ ಪ್ರಶ್ನೆ; ಮತ್ತೊಂದೆಡೆ ಹಣದ ಇಕ್ಕಟ್ಟಿನ ಸ್ಥಿತಿಯಿಂದ ಬಳಲುವಂತಾದ ದಾಸಪ್ಪ ಹರಿಗುರು ಸೇವೆಯಿಂದ ಮಾತ್ರ ಕಷ್ಟ ಪರಿಹಾರವಾಗುವುದೆಂದು ಭಾವಿಸಿ ಎರಡನೆಯ ಬಾರಿ ಕಾಶಿಯೆಡೆಗೆ ಯಾತ್ರಾರ್ಥಿಯಾಗಿ ತೆರಳಿದನು.

ಡಾ॥ ಕೆ. ಗೋಕುಲನಾಥ್

ಕಾಶಿಯವರೆಗಿದ್ದ ಅನೇಕ ಕ್ಷೇತ್ರಗಳ ಸಂದರ್ಶನ ತೀರ್ಥಸ್ನಾನಗಳನ್ನು ಮುಗಿಸಿದ ಮೇಲೆ ಕಾಶಿಯ ಈಶ್ವರನ ದರ್ಶನವೂ ಲಭಿಸಿತು. ಅಲ್ಲಿ ಎರಡು ದಿನಗಳ ಕಾಲ ತಂಗಿ ಹಿಂದಿರುಗುವ ಯೋಜನೆ ದಾಸಪ್ಪನದಾಗಿತ್ತು. ಒಂದು ದಿನ ದಾಸಪ್ಪ ಕನಸಿನಲ್ಲಿ ಪುರಂದರದಾಸರ ದರ್ಶನವನ್ನು ಪಡೆದನು. ಪುರಂದರದಾಸರು ದಾಸಪ್ಪನನ್ನು ಕನಸಿನಲ್ಲಿಯೇ ವ್ಯಾಸಕಾಶಿಗೆ ಕರೆದೊಯ್ದು ಹರಿದಾಸನಾಗೆಂದು ಆಶೀರ್ವದಿಸಿ 'ವಿಜಯವಿಠಲ' ಎಂಬ ಅಂಕಿತವನ್ನಿತ್ತರು. ನಾರದಾಂಶ ಸಂಭೂತ ಪುರಂದರ ಗುರುವರ್ಯರ ಮೂಲಕ ಶ್ರೀಹರಿ ಕನಸಿನಲ್ಲಿ ಮಾಡಿದ ಆಜ್ಞೆ ಮರುದಿನಕ್ಕೆ ಮಾಸಿರಲಿಲ್ಲ, ಸ್ವರೂಪಗುರುಗಳಾಶೀರ್ವಾದದ ಫಲವಾಗಿ ದಾಸಪ್ಪನಿಗೆ ದಿವ್ಯಜ್ಞಾನ ಉದಯಿಸಿತ್ತು. ಮನಸ್ಸಿನ ಆತಂಕವೆಲ್ಲಾ ಮಾಯವಾಗಿತ್ತು. ಕೊಡುವ ಕೊಂಬುವ ಎಲ್ಲ ಕಾರ್ಯಗಳು ಶ್ರೀಹರಿಯ ಸಂಕಲ್ಪದಂತೆ ನೆರವೇರುವುದೆಂಬ ತತ್ತ್ವ ಮನಸ್ಸಿಗೆ ದೃಢವಾಯಿತು. ಜೀವನದ ಪ್ರತಿಯೊಂದು ನಿಮಿಷವನ್ನು ಹರಿಭಕ್ತಿ ಸಾಧನೆಗಾಗಿ ವ್ಯಯ ಮಾಡಬೇಕೆಂಬ ನಿರ್ಧಾರ ಮನಸ್ಸಿನಲ್ಲಿ ಬೇರೂರಿತು. ಚತುರ್ದಶ ಲೋಕದೊಡೆಯನನ್ನು ಮುಕ್ತಿಯನ್ನು ಕರುಣಿಸಲು ಶಕ್ತನಾದ ಶ್ರೀಹರಿಯನ್ನು, ಕುರಿತು ಲೌಕಿಕ ಸಂಪತ್ತುಗಳಿಗಾಗಿ ಬೇಡುವುದು ಅವಮಾನ–ಅಯೋಗ್ಯವೆಂದು ಮನಸ್ಸಿಗೆ ಅರಿವಾಯಿತು. ಪರಮಾತ್ಮನ ಕಲ್ಯಾಣಗುಣಗಳನ್ನು ಕೊಂಡಾಡುವುದರಲ್ಲಿ ಆನಂದವನ್ನನುಭವಿಸುವ ಮನಸ್ಸು ಅವರದಾಯಿತು. ಬೆಟ್ಟದಂಥ ಸಮಸ್ಯೆ ಜೀವನದಲ್ಲಿದ್ದರೂ ಅದರ ಕಡೆಗೆ ಮನಸ್ಸು ಕೊಡದೆ ಪುರುಷೋತ್ತಮನ ದರ್ಶನಾಕಾಂಕ್ಷೆಯಾಗಿ ವಿಜಯವಿಠಲನ ವಂದನೆ, ಅರ್ಚನೆಗಳಲ್ಲಿ ಮನಸ್ಸು ನಿರತವಾಗಿ, ಆತ್ಮನಿವೇದನಾಪರ ಸ್ತೋತ್ರ ಸಾಹಿತ್ಯ ಅವರ ಹೃದಯದಿಂದ ಉಕ್ಕಿ ಹರಿಯಲಾರಂಭಿಸಿತು. 'ದಾಸ ಪುರಂದರನ ಪಾದವನು ಪೊಂದಿದೆನು' ಎಂದು ಕೃತಜ್ಞತೆಯಿಂದ ಶ್ರೀ ಪುರಂದರ ದಾಸರನ್ನು ಕುರಿತು ಕೀರ್ತಿಸಿದರು. ನೀತ ಗುರುಗಳ ಉಪದೇಶದ ಫಲವಾಗಿ ಪುರಾಣ ಪುರುಷೋತ್ತಮನ ದರ್ಶನ ಹೃದ್ಗುಹೆಯಲ್ಲಿ ಲಭಿಸಿದಾಗ ಅವರಿಗಾದ ಆನಂದ ಅನ್ಯಾದೃಶ.

'ಅಂತರಂಗದ ಕದವು ತೆರೆಯಿತಿಂದು ॥ಪ॥  
ಎಂತು ಪುಣ್ಯದ ಫಲವು ಪ್ರಾಪ್ತಿ ದೊರಕಿತೊ  
ಎನಗೆ ॥ಅ.ಪ.॥  
ಏಸು ದಿನವಾಯಿತೊ ಬೀಗ ಮುದ್ರೆಯ ಮಾಡಿ  
ದಾಸನಾಗಿದ್ದನೋ ದುರುಳರಲ್ಲಿ  
ಮೋಸವಾಯಿತು ಇಂದಿನ ತನಕ ತಮಸಿನ  
ರಾಶಿಯೊಳಗೆ ಹೂಳಿ ಕಾಣಿಸುತಿರಲಿಲ್ಲ ॥೧॥  
ಹರಿಕರುಣವೆಂಬಂಥ ಕೀಲಿ ಕೈ ದೊರಕಿತು  
ಗುರು ಕರುಣವೆಂಬಂಥ ಶಕ್ತಿಯಿಂದ  
ಪರಮ ಭಾಗವತರ ಸಹವಾಸದಲಿ ಪೋಗಿ  
ಹರಿ ಸ್ಮರಣೆಯಲ್ಲಿ ಬೀಗಮುದ್ರೆಯ ತೆಗೆದೆ  
॥೨॥

ಶ್ರೀ ವಿಜಯದಾಸರ ಈ ಕೃತಿ ತುಂಬ ಅರ್ಥವತ್ತಾಗಿದೆ. ಶ್ರೀ ವಿಜಯವಿಠಲನ ದರ್ಶನದಿಂದ ಆನಂದ ಪುಲಕಿತರಾದ ಕ್ಷಣದಲ್ಲಿ ಅವರಿಗಾದ ಆನಂದದ ಅನುಭವದೊಡನೆ ಅದುವರೆಗೆ ವ್ಯರ್ಥವಾಗಿ ಕಾಲ ಕಳೆದುದಕ್ಕಾಗಿ ಅವರ ಹೃದಯ ಪರಿತಪಿಸಿದ ಬಗೆಯನ್ನು ಇಲ್ಲಿ ಕಾಣಬಹುದು. ಗುರುಕಾರುಣ್ಯದಿಂದ ಹರಿಕರುಣವೆಂಬಂಥ ಕೀಲಿಕೈ ಹೇಗೆ ದೊರೆಯುವುದೆಂಬುದರ ಚಿತ್ರ ಇಲ್ಲಿದೆ.

ದಾಸಪ್ಪ ಶ್ರೀಹರಿಗುರುಗಳ ಕೃಪೆಗೊಳಗಾದ ತಕ್ಷಣ ಚೀಕನಪರವಿಗೆ ಹಿಂದಿರುಗಿದನು. ಜ್ಞಾನೆ

ಭಕ್ತಿ ವೈರಾಗ್ಯದ ಜೀವನವನ್ನು ನಡೆಸಲಿಚ್ಛಿಸಿ ತನ್ನನ್ನು ನಂಬಿದ ಬಂಧುಗಳನ್ನು ನಡು ನೀರಿನಲ್ಲಿ ಕೈ ಬಿಡದೆ ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಲು ಮನಸ್ಸು ಮಾಡಿದನು. ವಿಜಯವಿಠಲನ ಅರ್ಚನೆಯಲ್ಲಿ ಕಾಲ ಕಳೆಯುತ್ತಾ, ಸ್ಫೂರ್ತಿ ಚಿಲುಮೆ ಉಕ್ಕಿ ಹರಿದಾಗ ಕೃತಿಗಳನ್ನು ರಚಿಸುತ್ತಾ ಕಾಲಕ್ರಮದಲ್ಲಿ ವಿಜಯದಾಸರೆಂದು ದಾಸಪ್ಪ ಪ್ರಸಿದ್ಧನಾದನು

ವಿಜಯದಾಸರು ನಲವತ್ತೊಂದು ವರ್ಷಗಳ ದೀರ್ಘ ಹರಿದಾಸ ಜೀವನವನ್ನು ನಡೆಸಿದ ಮಹಾತ್ಮರು. ಈ ಅವಧಿಯಲ್ಲಿ ಅವರು ತೋರಿದ ಮಹಿಮೆಗಳು ಅನೇಕ. ಹರಿದಾಸ ಪರಂಪರೆಯಲ್ಲಿ ಅಪರೋಕ್ಷ ಜ್ಞಾನಿಗಳೆಂದು ಪ್ರಸಿದ್ಧರಾಗಿ ಇನ್ನೂ ಅನೇಕ ಹರಿದಾಸರಿರುವರಾದರೂ ವಿಜಯದಾಸರು ತೋರಿದಷ್ಟು ಮಹಿಮಾತಿಶಯ ಅನ್ಯರು ತೋರಿದಂತೆ ಕಂಡು ಬಂದಿಲ್ಲ.

ಮೋಹನನ ತಾಯಿಯ ಬಡತನದ ಸ್ಥಿತಿಯನ್ನು ಕಂಡು ಮರುಗಿ ತಾಯಿ ಮಕ್ಕಳನ್ನು ಸಾಕುವ ಜವಾಬ್ದಾರಿ ವಹಿಸಿಕೊಂಡು ಕೃಪಾಳುಗಳೆನಿಸಿಕೊಂಡರು. ಕಲ್ಲೂರು ಸುಬ್ಬಣ್ಣಾಚಾರ್ಯರ ದುರಹಂಕಾರವನ್ನು ಹರಿದು ದಾಸ ಬಳಗಕ್ಕೆ ಸೇರಿಸಿಕೊಂಡು ನಿರಹಂಕಾರಿಗಳೆನಿಸಿಕೊಂಡರು. ಮಾನ್ವಿಯ ಶ್ರೀನಿವಾಸಾಚಾರ್ಯರು ತೋರಿದ ಅಗೌರವದಿಂದ ಕುಪಿತರಾಗದೆ ಶರಣು ಹೊಕ್ಕಾಗ ಅವರ ರೋಗ ನಿವಾರಣೋಪಾಯ ಕ್ರಮ ಸೂಚಿಸಿ ಶಾಂತಮೂರ್ತಿ ಎಂಬ ಹೆಸರನ್ನು ಪಡೆದರು. ಕತ್ತೆಗೆ ನೀರು ಕುಡಿಸಿ ಅಹಿಂಸಾ ಧರ್ಮಧ್ವಜವನ್ನು ಹಾರಿಸಿದರು. ಮೋಹನ, ಬಾಗಿ ಕೇಶವರಾಯ, ಮಾನ್ವಿ ಶ್ರೀನಿವಾಸಾಚಾರ್ಯ ಮುಂತಾದವರಿಗೆ ಆಯುರ್ದಾನವನ್ನು ಮಾಡಿ–ಮಾಡಿಸಿ ಅಲೌಕಿಕ ವ್ಯಕ್ತಿ ಎನಿಸಿಕೊಂಡರು.

ವಿಜಯದಾಸರ ಜ್ಞಾನ ಭಕ್ತಿ ವೈರಾಗ್ಯಗಳ ಜೀವನಕ್ಕೆ ಶ್ರೀಹರಿಯೇ ತಲೆದೂಗಿ ಕೆಲವೊಮ್ಮೆ ಇವರೆದುರು ಸುಳಿದನಂತೆ! ಮನ್ನಾರಿನಲ್ಲಿ ವಿಜಯದಾಸರ 'ಮಡಿ ಕೃಷ್ಣ' ಯನ್ನು ಪರೀಕ್ಷಿಸಿದಾಗ ದಾಸರಿಗಾದ ಅನುಭವ ಅವರ 'ಮಾತನಾಡೊ ಮನ್ನಾರಿಕೃಷ್ಣ' ಎಂಬ ಅವರ ಕೃತಿಯಲ್ಲಿದೆ. ತಿರುಪತಿಯ ವೆಂಕಟೇಶ ದಾಸರಿಗೆ ದರ್ಶನ ಕೊಡದೆ ಇವರನ್ನು ರೇಗಿಸಿದಾಗ 'ನಿನ್ನ ದರ್ಶನಕೆ ಬಂದವನಲ್ಲ' 'ಜಯಮಂಗಳಂ ನಿತ್ಯ ಶುಭ ಮಂಗಳಂ' ಎಂಬ ನಿಂದಾಸ್ತುತಿಗಳು ಹರಿದವು! ದರ್ಶನ ಭಾಗ್ಯ ದೊರೆತ ಮೇಲೆ ಆಡಿದ ನಿಂದೆ ಸಟೆಯ ನುಡಿಗಳೆಂದು ತಿಳಿಸಿ ತಮ್ಮನ್ನು ಮನ್ನಿಸಬೇಕೆಂದು ಬೇಡಿದ ಪರಿಯು 'ನಿನ್ನ ದರ್ಶನಕ್ಕೆ ಬಂದವನೋ ಅನ್ಯರಿಂದ ಎನಗೆ ಏನು ಪ್ರಯೋಜನವೊ' ಎಂಬ ಕೃತಿಯಲ್ಲಿ ದಾಖಲೆಯಾಗಿದೆ.

ಹೀಗೆ ವಿಜಯದಾಸರ ಜೀವನದಲ್ಲಿ ನಡೆದ ಮಹಿಮಾತಿಶಯಗಳು, ಅನೇಕವಾಗಿವೆ. ಇಲ್ಲಿ ಹರಿಕರುಣೆಯನ್ನು ಪಡೆದಾಸರ ಶಾಂತ, ಕೋಮಲ ಕಾರುಣ್ಯ, ನಿರಹಂಕಾರ ಉಪಕಾರ ಪ್ರವೃತ್ತಿಯನ್ನೂ ಗುರುತಿಸಬಹುದಾಗಿದೆ. ವಿಜಯದಾಸರಿಂದ ಹರಿದಾಸ ಪರಂಪರೆ ಸ್ವಸ್ಥವಾಗಿದ್ದುದು ಪುನರುತ್ಥಾನವಾಯಿತು. ಪುರಂದರದಾಸರ ತರುವಾಯ ತ್ರುಟಿತವಾಗಿದ್ದ ಹರಿದಾಸ ಪರಂಪರೆಯನ್ನು ವಿಜಯದಾಸರು ಅನೇಕ ಯೋಗ್ಯ ವ್ಯಕ್ತಿಗಳಿಗೆ ಅಂಕಿತ ಪ್ರದಾನ ಮಾಡುವುದರ ಮೂಲಕ ಮುಂದುವರಿಸಿದರು. ಇವರ ಶಿಷ್ಯ ಶ್ರೇಷ್ಠರಲ್ಲಿ ತುಂಬ ಮುಖ್ಯರಾದವರೆಂದರೆ ಗೋಪಾಲದಾಸರು, ಮೋಹನದಾಸರು ಮತ್ತು ಆನಂದದಾಸರೆಂದು ಹೇಳಬಹುದು.

ಹರಿದಾಸರಲ್ಲಿ ಹೆಚ್ಚು ಸುಳಾದಿಗಳನ್ನು ರಚಿಸಿದವರೆಂದರೆ ವಿಜಯದಾಸರು. ಇವರು ರಚಿಸಿರುವ 600 ಸುಳಾದಿಗಳು ದೊರೆತಿವೆ. ಆದುದರಿಂದ ಇವರನ್ನು 'ಸುಳಾದಿದಾಸರು' ಎಂದೇ ಕರೆಯುವ ವಾಡಿಕೆಯುಂಟು. ಈ ಸುಳಾದಿ ಸಾಹಿತ್ಯರಾಶಿಯಿಂದಾಗಿರುವ ಉಪಕಾರ ಅಪಾರವೆನ್ನಬಹುದು. ಶ್ರೀಮದಾನಂದ ತೀರ್ಥರ ಸಿದ್ಧಾಂತದ ಸಾರ ಸರ್ವಸ್ವವನ್ನು ವಿಜಯದಾಸರು ಸರಳ ಕನ್ನಡ ಭಾಷೆಯಲ್ಲಿ ತಿಳಿಯುವಂತೆ ಹೇಳಿದ್ದಾರೆ. ಆದುದರಿಂದಲೇ ಗೋಪಾಲದಾಸರು "ಸಿದ್ಧಾಂತ ತತ್ತ್ವ ಮುದ್ದಿ ಮಾಡಿದಿಯೋ ರಾಯ"ಎಂದು ಗುರುಗಳನ್ನು ಕೊಂಡಾಡಿದ್ದಾರೆ.

ಹರಿದಾಸ ಸಾಹಿತ್ಯವೆಂದರೆ ಕೇವಲ ಏನೂ ಅರಿಯದ ವ್ಯಕ್ತಿಗಳು ತಾತ್ಕಾಲಿಕ ಮನಶ್ಶಾಂತಿಗೋಸುಗ ಹಾಡಿಕೊಳ್ಳಬಹುದಾದ ಕೀರ್ತನೆಗಳಷ್ಟೆ, ಎಂಬ ಭಾವನೆ ಇಂದಿಗೂ ಪಂಡಿತರಿಗುಂಟು. ವಿಜಯದಾಸರ ಕಾಲದಲ್ಲಂತೂ ಈ ಭಾವನೆ ಇನ್ನು ಜೋರಾಗಿದ್ದಿತೆನ್ನಲು ಮಾನ್ವಿಯ ಶ್ರೀನಿವಾಸಾಚಾರ್ಯರ ಮತ್ತು ಕಲ್ಲೂರು ಸುಬ್ಬಣ್ಣಾಚಾರ್ಯರ ಜೀವನ ಕಥೆಗಳೇ ಸಾಕ್ಷಿಯಾಗಿವೆ. ಈ ಲಘು ಭಾವನೆ ಸಮಾಜದಲ್ಲಿ ಮಾಯವಾಗುವಂತೆ ಮಾಡುವ ಉದ್ದೇಶದಿಂದಲೇ ಏನೋ ವಿಜಯದಾಸರು ಪ್ರೌಢವಾದ ಸರಣಿಯಲ್ಲಿ ಶಾಸ್ತ್ರದಲ್ಲಿ ಹುದುಗಿರುವ ಅನೇಕ ಗಂಭೀರ ಗಹನ ಪ್ರಮೇಯಗಳನ್ನು ಸುಳಾದಿಗಳಲ್ಲಿ ಚಿತ್ರಿಸಿದರು. 'ಸುಳಾದಿ' ನಿಜಕ್ಕು ಸುಲಭವಾದ ಹಾದಿಯಾಗಿಲ್ಲ. ಇವುಗಳನ್ನೇ ಅರ್ಥಗೈಯಲು ಶಾಸ್ತ್ರದ ಪಾಂಡಿತ್ಯ-ಧರ್ಮ ರಹಸ್ಯಗಳ ಅರಿವು ಅತ್ಯಗತ್ಯ ಎನ್ನಬಹುದು. ಆದುದರಿಂದಲೇ 'ಸುಧಾ ಓದಿ ಪರಾ ಹೇಳು' ಎಂಬ ಗಾದೆ ಹರಿದಾಸ ಲೋಕದಲ್ಲಿ ರೂಢವಾಯಿತೆನ್ನಬಹುದು.

ವಿಜಯದಾಸರು ಸುಳಾದಿಗಳಲ್ಲಿ ದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ತಿಳಿಸಿರುವರೆನ್ನಬಹುದು. ಒಂದು ದೃಷ್ಟಿಯಲ್ಲಿ ಇವು ದ್ವೈತ ಸಿದ್ಧಾಂತದ ವಿಶ್ವಕೋಶವಾಗಿದೆ. ಪ್ರಪಂಚದ ಸೃಷ್ಟಿ ಕ್ರಮದಿಂದಾರಂಭಿಸಿ ಲಯ ಕಾಲದವರೆಗೆ ಪರಮಾತ್ಮನು ಮಾಡುವ ಕ್ರಿಯೆ ಮತ್ತು ಜೀವರ ಪರಿಸ್ಥಿತಿಯನ್ನು ಕುರಿತು ಈ ಸುಳಾದಿಗಳಲ್ಲಿ ತಿಳಿಸಿರುವರೆನ್ನುವುದು ಅತಿಶಯೋಯಲ್ಲ. ಶ್ರೀಹರಿಯ ಶಕ್ತಿ, ವ್ಯಾಪ್ತಿ, ಗುಣ, ಅವತಾರಗಳ ವಿವರಣೆ, ಬಿಂಬಕ್ರಿಯೆ, ವಿಭೂತಿರೂಪಗಳು, ಪ್ರೇರಕಶಕ್ತಿ, ವಿವಿಧ ಬಗೆಯ ಜೀವರ ಸಾಧನೆಯ ಕ್ರಮ ಭಕ್ತಿಯ, ಸ್ವರೂಪ, ಭಕ್ತನ ಮಾನಸಿಕ ಪರಿಸ್ಥಿತಿ, ಧರ್ಮಸೂಕ್ಷ್ಮ, ಜೀವರ ಕರ್ತವ್ಯ, ದತ್ತಸ್ವಾತಂತ್ರ್ಯ, ಅಪರೋಕ್ಷಜ್ಞಾನದ ಸ್ವರೂಪ, ಮುಕ್ತಲೋಕದ ವಿವರಣೆ–ಇವೇ ಮೊದಲಾದ ಅತ್ಯಪೂರ್ವ ವಿಷಯಗಳನ್ನು ವಿಜಯದಾಸರು ಸುಳಾದಿಗಳಲ್ಲಿ ವಿವರಿಸಿದ್ದಾರೆ. ನೂರಾರು ಸಂಸ್ಕೃತ ಗ್ರಂಥಗಳಲ್ಲಿ ಚದುರಿ ಹೋಗಿರುವ ವಿಷಯಗಳನ್ನೇ ಕೇವಲ 600 ಸುಳಾದಿಗಳಲ್ಲಿ ಅಡಕವಾಗಿರಿಸಿರುವುದು ಮೆಚ್ಚತಕ್ಕ ಉಪಯುಕ್ತ ಕಾರ್ಯವೆನಿಸುತ್ತದೆ. ಈ ಸುಳಾದಿಗಳನ್ನು ವಿಷಯಾನುಗುಣವಾಗಿ ಸಕ್ರಮವಾಗಿ ಜೋಡಿಸಿದರೆ ಅವರ ಸುಳಾದಿಗಳು ಒಂದು ಗ್ರಂಥವಾಗುತ್ತದೆ.

ವಿಜಯದಾಸರು ಗಹನ ಪ್ರಮೇಯ ವಿಚಾರಗಳನ್ನು ಕನ್ನಡದಲ್ಲಿ ತಿಳಿಸುವಾಗ ಅನುಸರಿಸಿರುವ ಮಾರ್ಗ ಹಿತವಾದದು. ವಿಷಯವನ್ನು ಮತ್ತಷ್ಟು ಜಟಿಲಗೊಳಿಸದೆ ಉತ್ತಮ ಹೋಲಿಕೆಗಳ ಮೂಲಕ, ಕೆಲವೊಮ್ಮೆ ಮಾಲೋಪಮೆಗಳ ಮೂಲಕ ವಿಷಯ ಮನದಟ್ಟುವಂತೆ ತಿಳಿಸುತ್ತಾರೆ. ಜೀವರಿಗಿರುವ ಸ್ವಾತಂತ್ರ್ಯದ ಪ್ರಶ್ನೆಗೆ ಉತ್ತರ ತುಂಬ ಜಟಿಲ; ಆದರೆ ವಿಜಯದಾಸರು ದತ್ತಸ್ವಾತಂತ್ರ್ಯದ ವಿಚಾರವನ್ನು ಸುಲಭವಾಗಿ ಪರಿಹರಿಸಿರುತ್ತಾರೆ.

'ಇನನ ಪ್ರಕಾಶದೊಳು ಎಳೆ ಬತ್ತಿಯಲ್ಲಿ
ಮಿಣಿಮಿಣಿಗುಟ್ಟುವ ದೀಪ ರಚಿಸಲು
ಜನರಿಗೆ ಕಾಣಿಸದು ಕಾಣಿಸಿದರೆ
ಪ್ರಯೋಜನಕೆ ಬಾರದು ಸು
ಮ್ಮನೆ ನಾಮವೆ ಉಂಟು ಅಕಾರ್ಯಕವಾಗಿ
ಎನಗಿದ್ದ ಸ್ವಾತಂತ್ರ್ಯ ಅನಾದಿಯಲ್ಲಿಂದ
ಇನಿತು ಇಪ್ಪದು ಕಾಣೆ ಇದು ನಿನ್ನಧೀನ

ಮನುಷ್ಯ ತನ್ನ ಶಕ್ತಿ ಸಾಮರ್ಥ್ಯಗಳನ್ನು ನೆಮ್ಮಿ ಲೋಕದಲ್ಲಿ ಏನು ಬೇಕಾದರೂ ಸಾಧಿಸುವುದಾಗಿ ಜಂಭ ಕೊಚ್ಚುತ್ತಾನೆ, ಆದರೆ ತನ್ನ ಪ್ರಯತ್ನ ನಿಷ್ಫಲವಾದಾಗ ಮಾತ್ರ ವಿಧಿಯ ಚಿತ್ತ

(31 ನೇ ಪುಟ ನೋಡಿ)

# ನಮ್ಮ ಆಚಾರಗಳು

ನಮ್ಮ ಆಚಾರಗಳಲ್ಲಿ ಊಟದ್ದೇ ಒಂದು ದೊಡ್ಡ ಪ್ರಕರಣ. ನೆಂಟರನ್ನೋ ಇಷ್ಟರನ್ನೋ 'ಊಟಕ್ಕೇಳಿ' ಎಂದು ಎಬ್ಬಿಸಿ ಕರೆದೊಯ್ದು 'ಕುಡಿ ಬಾಳೆ ಎಲೆ'ಯ ಮುಂದೆ ಕೂರಿಸುತ್ತೇವೆ. ತೊಳೆದ ಎಲೆಯ ತುದಿ ಕುಳಿತವನ ಎಡಬದಿಗೇ ಬರಬೇಕು. ನೆಲಕ್ಕೆ ಮೊದಲು ನೀರು ಚಿಮುಕಿಸಿ – ರಂಗೋಲಿಯ ಕೋಟೆ ಹಾಕಿಯೇ ಎಲೆ ಇಡಬೇಕು. ಈ ಕಟ್ಟಲೆಗಳಲ್ಲಿ ಅರ್ಥವಿದೆಯೆ? ಇದೆ ಎಂದೆನ್ನುತ್ತದೆ ತರ್ಕ. ನೆಲಕ್ಕೆ ನೀರು ಚಿಮುಕಿಸುವುದರಿಂದ ಧೂಳಿನ ಹಾರಾಟ ನಿಲ್ಲುತ್ತದೆ. ರಂಗೋಲಿಯ ಕೋಟೆ ಬರೆಯುವುದರಿಂದ ಸುತ್ತಣ ಕ್ರಿಮಿಗಳು ಹರಿದು ಬರುವುದು ತಡೆಯುತ್ತದೆ. ತುದಿ ಸಪೂರವಾಗಿದ್ದು ಎಡಗಡೆಗೆ ಬಂದರೆ ಅಗಲದ ಭಾಗ ಬಲಗಡೆಗೆ– ಊಟ ಮಾಡುವ ಕಡೆಗೆ ಬರುತ್ತದೆ. ಇದು ಅಲ್ಲಿನ ತತ್ತ್ವ. ಎಲೆಯನ್ನು ತೊಳೆಯುವಾಗ ಬೆರಳುಗಳ ಹಿಂಬದಿಯಿಂದ ತೊಳೆಯಬಾರದು ಎಂಬ ರೂಢಿ ಇದೆ. ಕಾರಣವೇನು? ಬೆರಳಿನ ಹಿಂಭಾಗದಲ್ಲಿ ಚರ್ಮದ ಸುಕ್ಕುಗಳು – ಕೂದಲು ಇರುವುದರಿಂದ ಹಾಗೂ ಬಳಕೆಗೆ ಸರಿ ಬಾರದುದರಿಂದ– ಎಲೆ ಸೀಳುವ ಭಯವಿದೆ. ಹಾಗಾಗಿ ಅಂಗೈಯಿಂದಲೇ ಎಲೆ ತೊಳೆಯುವುದು ಸೂಕ್ತ. ಹಂಚಿಕಡ್ಡಿ ಚುಚ್ಚಿ ಮಾಡಿದ ಪತ್ರಾಳಿ ಎಲೆಗಳನ್ನು ಯಾರೂ ಹಿಂಗೈಯಿಂದ ತೊಳೆಯಲಾರರು.

ಬಡಿಸುವಾಗ ಮೊದಲು ಉಪ್ಪು ಬರುತ್ತದೆ – ಎಡಗಡೆಯ ಮೇಲ್ತುದಿಗೆ. ಬಲತುದಿಯ ಕೆಳಗಡೆಗೆ ಕೈಹಾಕಿದ ಕೂಡಲೇ ಸಿಗುವಂತೆ ಪಾಯಸ. ದೂರದಲ್ಲಿ ಉಪ್ಪು, ನಡುವೆ ಅನ್ನ. ಇದಿರುಗಡೆಗೆ ಸಾಲಾಗಿ ಪಲ್ಯ, ಪಳದ್ಯ, ಚಟ್ನಿ, ಗೊಜ್ಜು, ಉಪ್ಪಿನಕಾಯಿ ಇತ್ಯಾದಿಗಳು, ಎಡಗಡೆಯಿಂದ ಅನುಕ್ರಮವಾಗಿ ಬಡಿಸಲ್ಪಡುತ್ತವೆ.

ಅನ್ನದ ಮೇಲೆ ತುಪ್ಪ. ನಂತರ ಊಟದ ಆರಂಭ. ನಂತರದ ಬಡಿಸುವಿಕೆಯಲ್ಲಿ ಕಾಲ ದೇಶ–ಗಳ ವ್ಯತ್ಯಾಸವಿದೆ. ಬಡಿಸುವವರು ಹೆಚ್ಚಾಗಿ ಹೆಂಗಸರು. ಅವರು ತಯಾರಿಸಿದ ಅಡಿಗೆಯನ್ನು ಅವರೇ ಬಡಿಸಬೇಕು. ಊಟದಲ್ಲಿ ತಾಯಿಯ ಮಮತೆ ಇದ್ದರೆ ಮಾತ್ರ ಊಟ ರುಚಿಸೀತು. ಶತ್ರುವಿನ ಸಿಹಿಯೂ ಇದ್ದರೆ ರುಚಿಸದು. ಊಟ ಕೇವಲ ಹೊಟ್ಟೆಯ ಚೀಲ ತುಂಬಿಸುವ ಕ್ರಿಯೆಯಲ್ಲ. ಅದು ಮನಸ್ಸು ಮೈಗಳಿಗೆ ಸಮಾನ ಪ್ರಿಯವಾಗಬೇಕು. ಹಸಿ ಮಾಂಸ ತಿನ್ನುತ್ತಿದ್ದ ಕಾಲದಲ್ಲಿಯೂ ತಾಯಿಯೇ ಹಂಚಿಕೊಡುವುದು ರೂಢಿಯಲ್ಲಿತ್ತು. ಊಟದಲ್ಲಿ ಪಂಚಭಕ್ಷ್ಯ ಷಡ್ರಸ ಎಂಬ ಮಾತು ಕೇಳುತ್ತದೆ. ಹಾಗೆಂದರೇನು? ನಮಗೆ ತಿಳಿದಿರಬೇಡವೆ? ಅದು ಪುರೋಹಿತರು ಮಾಡಿದ ರೂಢಿ ಎಂದು ತೆಗಳಿದರೆ ನಮಗೆ ಬಂದ ಲಾಭವೇನು? ಪಂಚ – ಭಕ್ಷ್ಯ – ಪಂಚಭಕ್ಷ್ಯ. ಪಂಚ ಅಂದರೆ ಐದು. ಭಕ್ಷ್ಯ ಅಂದರೆ ಜಗಿದು ತಿನ್ನಬಹುದಾದ ಎಂದರ್ಥ; ಹಾಗೆಂದು ಪಂಚಭಕ್ಷ್ಯಗಳು ಎಲ್ಲವೂ ಜಗಿದೇ ತಿನ್ನುವಂತಹವುಗಳಲ್ಲ. ಲೇಹ್ಯ, ಚೋಷ್ಯ, ಭೋಜ್ಯ, ಭಕ್ಷ್ಯ, ಪೇಯ – ಇವು ಪಂಚಭಕ್ಷ್ಯಗಳು.

ಚಟ್ನಿ, ಉಪ್ಪಿನಕಾಯಿ, ಗೊಜ್ಜು ಇತ್ಯಾದಿ ನೆಕ್ಕಿ ತಿನ್ನುವುವು ಲೇಹ್ಯ. ಸಾರು, ಕೀರು, ಸೂಪುಗಳು – ಹೀರಿ ಕುಡಿಯುವಂತಹವುಗಳು – ಚೋಷ್ಯ. ಅನ್ನ, ಮುದ್ದೆ, ಮುಂತಾದ ಬಾಯಿ ತುಂಬ ಹಾಕಿ ಬಾಯಾಡಿಸಿ ನುಂಗುವಂತಹವು ಭೋಜ್ಯ. ವಡೆ, ಚಕ್ಕುಲಿ, ಬೋಂಡ, ಹೋಳಿಗೆ ಇತ್ಯಾದಿ ಹಲ್ಲುಗಳ ಸಹಾಯದಿಂದ ಜಗಿದು ತಿನ್ನುವಂತಹವು ಭಕ್ಷ್ಯಗಳು. ನೀರು, ಶರಬತ್ತು, ಪಾನಕ, ಮುಂತಾದವುಗಳು ಪೇಯಗಳು. ಇವು ಐದು ಬಗೆಯ ಪಂಚಭಕ್ಷ್ಯಗಳಾಗಿವೆ. ಇವುಗಳಲ್ಲೂ ಕೆಲವು ನುಂಗುವುವು – ಕೆಲವು ಹೀರುವುವು. ಕೆಲವು ನೆಕ್ಕುವುವು ಆದರೂ ಇವುಗಳಿಗೆ ಜಗಿದು ತಿನ್ನುವುವು ಅಂದರೆ 'ಭಕ್ಷ್ಯ' ಎಂದು ಹೆಸರಾಗಲು ಕಾರಣವೇನು? ಎಂಬ ತರ್ಕ ಮೂಡದಿರಲಿಲ್ಲ. ಉತ್ತರ ಬಹಳ ಕಾಲದವರೆಗೆ ಸಿಗಲಿಲ್ಲ. ಆದರೆ ಈಚೆಗೆ ಆಯುರ್ವೇದ ಗ್ರಂಥಗಳನ್ನು ನೋಡಿದಾಗ ಅಲ್ಲಿ ಹಾಲಾಗಲೀ, ನೀರಾಗಲೀ ಬೆಣ್ಣೆಯಾಗಲೀ, ಬೆಲ್ಲವಾಗಲೀ, ಯಾವುದೇ ಒಳಸೇವಿಸುವ ವಸ್ತುವನ್ನು ಕನಿಷ್ಟ ಮೂವತ್ತು ಸಲ ಜಗಿದು ನುಂಗಬೇಕು ಎಂಬ ವಿಧಿ ಇತ್ತು. ನೀರನ್ನು ಮೂವತ್ತು ಸಲ ಜಗಿಯಬೇಕು – ಎನ್ನುತ್ತದೆ ಆ ಗ್ರಂಥ. ನಗು ಬಾರದಿರಲಿಲ್ಲ. ನಂತರ ತಿಳಿದ ಸಂಗತಿಯಿಂದ ನಗು ನಿಂತಿತು. ಸೇವಿಸುವ ವಸ್ತುಗಳನ್ನು ಜಗಿಯುವುದು 'ಸವಿ' ನೋಡಲಿಕ್ಕಾಗಿ ಮಾತ್ರವಲ್ಲ. ಹಾಗೆ ಜಗಿಯುವುದರಿಂದ ಆಹಾರದ ಜೊತೆಗೆ ಬಾಯಲ್ಲಿನ ಜೊಲ್ಲುರಸ ಸೇರಿಕೊಂಡು ಅದರಲ್ಲಿನ ರೋಗನಿರೋಧಕ ತಂತುಗಳಿಂದ ಒಸರುವ ರಸದಿಂದಾಗಿ ಆಹಾರವೂ ಶುದ್ಧವಾಗುತ್ತದೆ – ಬೇಗನೆ ಜೀರ್ಣವಾಗುತ್ತದೆ. ಎಂದು ಅದೇ ಗ್ರಂಥದಲ್ಲಿ ಹೇಳಲಾಗಿದೆ 'ಎನ್‌ಜೈಮ್'ಗಳನ್ನು ಜೀರ್ಣಕ್ಕಾಗಿ ಪ್ರತ್ಯೇಕ ಸೇವಿಸಬೇಕಾದ ಅಗತ್ಯವಿಲ್ಲ. ಅವು ನಮ್ಮ ದವಡೆಯಲ್ಲಿರುವ ಗ್ರಂಥಿಗಳಲ್ಲೇ ಒಸರುತ್ತದೆ. ಈ ಮಾತನ್ನು ವೈದ್ಯರೂ ಸಮರ್ಥಿಸುತ್ತಾರೆ. ಬಹುಶಃ ಇದನ್ನರಿತೇ ನಮ್ಮ ಹಿರಿಯರು 'ಆಡಿನಂತೆ ತಿನ್ನು ಆನೆಯಂತೆ ಮೀಯು' — ಎಂಬ ಗಾದೆ ಮಾಡಿರಬಹುದು. ಆಡಿನಂತೆ ತಿನ್ನು ಎಂದರೆ ಸಿಕ್ಕಿದ್ದನ್ನೆಲ್ಲ ತಿಂದು ನಂತರ ಮೆಲುಕಾಡು ಎಂದರ್ಥವಲ್ಲ ಆಡಿನಂತೆ ಚೆನ್ನಾಗಿ ಜಗಿದು ತಿನ್ನು ಎಂದು ಅರ್ಥ ಮಾಡಬೇಕು. ಆನೆಯಂತೆ ಮೀಯು ಎಂದರೆ ತಲೆಗೆ ಕೆಸರು ಹಾಕಿಕೋ ಎಂದಲ್ಲ. ನಿಧಾನವಾಗಿ ಸಾಕಷ್ಟು ಹೊತ್ತು ನೀರಿನಲ್ಲಿದ್ದು ಸ್ನಾನಮಾಡು, ಗುಬ್ಬಚ್ಚಿಯಂತೆ ಪಟಪಟ ಮಾಡಿ ಎದ್ದೋಡ ಬೇಡ – ಎಂದರ್ಥ. ಜಗಿಯದೆ ತಿಂದ ಆಹಾರ ಜೀರ್ಣಕ್ಕೆ ಪಿತ್ಥರಸದ ಸ್ರಾವ ಅಧಿಕವಾಗ ಬೇಕಾಗುತ್ತದೆ. ಕ್ರಮೇಣ ಅಧಿಕ ಸ್ರಾವದ ರೂಢಿಗೆ ಅಳವಟ್ಟ ಪಿತ್ತಕೋಶ ಆಹಾರವಿಲ್ಲದಾಗಲೂ ನಿಯಮಿತ ವೇಳೆ ಪ್ರಮಾಣದಲ್ಲಿ ಪಿತ್ತರಸ ಸ್ರವಿಸುತ್ತದೆ. ಆಗ ಖಾಲಿ ಹೊಟ್ಟೆಗೆ ಪಿತ್ತರಸ ಹರಿದು ಕರುಳು ಬೇಯುವುದು, ಕರುಳಿನ ಹುಣ್ಣಾಗುವುದು ಸಾಧ್ಯ.

ಹಾಗಾಗಿಯೇ ಊಟದ ನಡುವೆ ಬಡಿಸುವವರು 'ನಿಧಾನ ಕೂತ್ಕೊಳ್ಳಿ' — ಎಂಬ ಉಪಚಾರ ಹೇಳುವುದಿದೆ; ಯಾವುದಕ್ಕೂ ಅವಸರ ಸಲ್ಲದು– ಊಟಕ್ಕಂತೂ ಖಂಡಿತ ಅವಸರ ಸಲ್ಲದು.

**ರಸಿಕ ಪುತ್ತಿಗೆ**

'ಗೊತ್ತಾದ ಹೊತ್ತಿನಲ್ಲಿ ತುತ್ತನ್ನು ಸವಿ ಸವಿದು ಉಣ್ಣಬೇಕು' – ಎಂಬ ಮಾತಿನ ಹಿಂದೆ ಎಲ್ಲ ಅನುಭವಗಳ ಸಾರವಿದೆ.

ಇಂಥ ಊಟ ಬಲ್ಲವನಿಗೆ ರೋಗವಿಲ್ಲವೆಂದು ಸರ್ವಜ್ಞ ಹೇಳಿರಬಹುದು. ಊಟ ಬಲ್ಲವನೆಂದರೆ ಕೈಯಿಂದ ತುತ್ತೆತ್ತಿ ಬಾಯಿಗಿಡಲು ತಿಳಿದವನು ಎಂದಲ್ಲ. ಊಟದ ಕ್ರಮ ಅರಿತವನು ಎಂದರ್ಥ.

ಊಟದ ನಡುವೆ ಮಾತಾಡಬಾರದು. ಜಗಳ ಕೆಟ್ಟ ಮಾತು ಆಡಬಾರದು. ಜೋರಾಗಿ ನಗಬಾರದು ಎಂದೆಲ್ಲ ನಿಷೇಧಗಳಿವೆ. ಇವೆಲ್ಲಾ ಊಟದ ಸ್ವಾಸ್ಥ್ಯಕ್ಕೆ ಅಡ್ಡಿಯಾಗಬಾರದೆಂದೇ.

ಊಟದ ಕೊನೆಗೆ 'ಮಜ್ಜಿಗೆ' ಬರುತ್ತದೆ. ಕೊನೆಗೇ ಯಾಕೆ? ಮೊದಲೇ ಯಾಕೆ ಬರಬಾರದು? ಕೇಳಿ – ಕೇಳಿದರೆ ಉತ್ತರವಿದೆ. ಮೊಸರನ್ನು ಕಡೆದು ಬೆಣ್ಣೆ ತೆಗೆದ ಮಜ್ಜಿಗೆ ಜೀರ್ಣಕಾರಿ, ಹಾಗಾಗಿ ಅದು ಕೊನೆಗೇ ಇರಬೇಕು. ಅದು 'ಆ್ಯಂಟಸಿಡ್' ಕೂಡಾ ಆಗಿದೆ. ಹಾಗಾಗಿ ಮಜ್ಜಿಗೆ ಕೊನೆಗೇ ಬರುತ್ತದೆ.

ಊಟದ ನಂತರ ತಾಂಬೂಲ ಸೇವನೆಯೂ ನಮ್ಮ ನಡವಳಿಕೆಗಳಲ್ಲಿದೆ. ತಾಂಬೂಲ ಚರ್ವಣ– ಎಂಬ ಒಂದು ಪ್ರಕರಣವೇ ಆಯುರ್ವೇದದಲ್ಲಿದೆ. ದೇವರಿಗೂ ತಾಂಬೂಲವನ್ನು ಅರ್ಪಿಸಲಾಗುತ್ತದೆ. (ನಮ್ಮ ದೇವರು ನಮ್ಮ ಹಾಗೇ ಇರುತ್ತಾನೆ. ನಾವು ತಿಂದುದನ್ನು ಅವನೂ ತಿನ್ನುತ್ತಾನೆ.) ಸುಣ್ಣ, ವೀಳ್ಯದ ಎಲೆ, ಅಡಿಕೆಗಳು ಜೀರ್ಣಕಾರಕ– ಕ್ರಿಮಿನಾಶಕ, ಸುಗಂಧಕ ತತ್ತ್ವಗಳಿಂದ ಕೂಡಿದೆ. ತಾಂಬೂಲ ಸೇವನೆಯಲ್ಲಿರುವ ಕೆಲವು ನಿಷೇಧಗಳು ಗಮನಿಸತಕ್ಕವು. ತಟ್ಟೆ ತುಂಬ ಎಲೆ ಇಟ್ಟರೆ ಅವುಗಳಲ್ಲಿ ಆಯ್ಕೆ ಮಾಡಬಾರದು, ಅಡಿಕೆ ಬಾಯಿಗೆ ಹಾಕಿಕೊಂಡು ವೀಳ್ಯದೆಲೆಗೆ ಸುಣ್ಣ ಹಚ್ಚುತ್ತ ಇರಬಾರದು. ಎಲೆ ಅಡಿಕೆ ಒಟ್ಟಿಗೇ ಬಾಯಿಗೆ ಇಡಬಾರದು. ಒಂದು ಎಲೆಯನ್ನು ಸೀಳಿ ಅರ್ಧ ತಿಂದು ಅರ್ಧ ಉಳಿಸಬಾರದು – ಅಥವಾ ಇನ್ನೊಬ್ಬರಿಗೆ ಕೊಡಬಾರದು. ಇವೆಲ್ಲ ನಿಷೇಧಗಳು. ಇವುಗಳಲ್ಲಿ ವ್ಯಾವಹಾರಿಕ ಜಾಣತನಗಳು ಕಾಣಿಸುತ್ತವೆ. ಇಟ್ಟ ಎಲೆಗಳಲ್ಲಿ ಎಲ್ಲರೂ ಆಯ್ಕೆ ಮಾಡಿದರೆ ಕೊನೆಗೆ ಬಂದವರಿಗೆ ಏನು ಗತಿ? ಅಡಿಕೆ ಬಾಯಿಗೆ ಹಾಕಿಕೊಂಡು ಜಗಿಯುತ್ತಲೇ ಎಲೆಗೆ ಸುಣ್ಣ ಸವರುತ್ತಲಿದ್ದರೆ ಅಡಿಕೆ ರಸ ನುಂಗಿಹೋದರೆ ತಲೆಸುತ್ತು ಬರಬಹುದು ಅಥವಾ ಸುಣ್ಣ ಹಚ್ಚಿದ ಎಲೆಗೆ ಅಡಿಕೆಯ ಪ್ರಮಾಣ ಕಡಿಮೆಯಾಗಿ ಬಾಯಿ ಸುಡಬಹುದು. ಸುಣ್ಣ ಹಚ್ಚಿದ ಎಲೆ ಅಡಿಕೆ ಒಟ್ಟಿಗೇ ಬಾಯಿಗೆ ಹಾಕಿ ಜಗಿದರೆ ಎಲೆ ಮೊದಲು ಸುಣ್ಣಗಾಗಿ ಅಡಿಕೆ ನಂತರ ನುಣ್ಣಗಾದರ ಬಾಯಿ ಸುಡಬಹುದು. ಅರ್ಧ ಎಲೆ ತಿಂದು ಉಳಿಸಿದರೆ ಉಳಿದರ್ಧ ಹಾಳಾಗುತ್ತದೆ–ಅರ್ಧ ಎಲೆ ಸಾಲದಾಗುತ್ತದೆ. ಇವೆಲ್ಲ ವ್ಯವಹಾರದ ಜಾಣತನಗಳು. ಹಿರಿಯರು ಕಿರಿಯರಿಗೆ ತಿಳಿಹೇಳುವ ಸಂಗತಿಗಳು. ಇವೆಲ್ಲ ವ್ಯವಹಾರದ ತಾಂತ್ರಿಕ ಪರಿಣತಿಗಾಗಿ ಇರುವ ನಿಷೇಧಗಳು. ಇದೇ ರೀತಿ ಎಡಗೈಯಲ್ಲಿ ನೀರು ಕುಡಿಯಬಾರದು, ಎಡಗೈಯಲ್ಲಿ ಬಡಿಸಬಾರದು, ಸುತ್ತಲೂ ಗುಂಡಾಗಿ ಊಟಕ್ಕೆ ಕುಳಿತುಕೊಳ್ಳಬಾರದು ಇತ್ಯಾದಿ ಕೆಲವು ನಡವಳಿಕೆಯ ನಿಷೇಧಗಳಿವೆ. ಇವುಗಳಿಗೆಲ್ಲ ವೈಜ್ಞಾನಿಕ ಕಾರಣ ಸಿಗದು. ವ್ಯಾವಹಾರಿಕ ಕಾರಣಗಳು ಸಿಗುತ್ತವೆ. ಯೋಚಿಸಿದರೆ ಅರ್ಥವಾಗುತ್ತವೆ. ಕಾಲ ಬದಲಾದಂತೆ ಟೇಬಲ್ ಮೇಲೆ ಸುತ್ತ ಕುಳಿತು ನಡುವೆ ಊಟದ ಸಾಮಗ್ರಿಗಳನ್ನು ಇರಿಸಿಕೊಂಡು ತಾವೇ ಬಡಿಸಿಕೊಂಡು ಊಟ ಮಾಡುವ ಆಂಗ್ಲ ಪದ್ಧತಿ ಇದೆ. ಗಂಡಹೆಂಡಿರ ನಡುವೆ ಅತಿಥಿಯನ್ನು ಕೂರಿಸುವ ಕ್ರಮವಿದೆ. ಆದರೆ ಸಾಲಾಗಿ ಕುಳಿತು, ಆತ್ಮೀಯರು ಅಕ್ಕಪಕ್ಕದಲ್ಲಿ ಕುಳಿತು ಮನೆಯ ಆತ್ಮೀಯರು ಅಕ್ಕರೆಯಿಂದ ಬಡಿಸಿದ್ದನ್ನು ಊಟ ಮಾಡುವಾಗಿನ ಆನಂದ ಈ ಅಭಾರತೀಯ ಕ್ರಮದಿಂದ ದೊರೆಯಲಾರದೇನೋ?

ಊಟದ ನಂತರ ಕೈತೊಳೆದು ನೀರು ಇತರರಿಗೆ ಸಿಡಿಯುವಂತೆ ಕೈ ಚಿಮ್ಮಬಾರದೆಂಬ ನಿಷೇಧವಿದೆ. ಹಾಗೆ ಸಿಡಿಸಿದರೆ ಕೈಬೆರಳಿಗೆ 'ಉಗುರುಸುತ್ತು ರೋಗ' ಬರುತ್ತದೆ ಎಂಬ ನಂಬಿಕೆ ಇದೆ. ಇದು ಸಭ್ಯ ನಡವಳಿಕೆಗೆ ಹಾಕಿದ ಭಯದ ಬೇಲಿ. ಕೈಯ ನೀರು ಇತರರ ಮೇಲೆ ಸಿಡಿಯುವಂತೆ ಕೈ ಕೊಡವುವುದು ಸಭ್ಯತೆಯಲ್ಲ.

ಕೆಲವು ಜನಾಂಗಗಳಲ್ಲಿ ಮಡಿ, ಮೈಲಿಗೆ ಪದ್ಧತಿ ರೂಢಿಯಲ್ಲಿದೆ. ಅರ್ಥ ತಿಳಿಯದಿದ್ದರೆ ಈ ಪದ್ಧತಿ ವಿಚಿತ್ರವಾಗಿ ಕಾಣಿಸುತ್ತದೆ. ಆದರೆ ಈ ಪದ್ಧತಿಯ ಹಿನ್ನೆಲೆಯಲ್ಲಿ ನೈರ್ಮಲ್ಯದ ಸಿದ್ಧಾಂತವಿದೆ ಎಂಬ ಸಂಗತಿ ತಿಳಿಸಿದರೆ ಆಚರಿಸಲು ಮನಸ್ಸು ಹಿಂಜರಿಯದು. ಪೂಜಾಗೃಹ, ಅಡಿಗೆ, ಊಟದ ಮನೆಗಳಿಗೆ ಮಡಿ, ಮೈಲಿಗೆಯ ಕಟ್ಟು ಬಹಳ ಕಠಿಣವಿರುವುದಿದೆ. ಕಾರಣ ಇವು ಪವಿತ್ರವಾಗಿರಬೇಕಾದ ಜಾಗಗಳೆಂದು.

ಒಗೆದು ಸ್ವಚ್ಛಗೊಳಿಸಿದ ಬಟ್ಟೆ ಮಡಿ. ಕೊಳೆಯಾದ ವಸ್ತ್ರ ಮೈಲಿಗೆ. ಅವುಗಳನ್ನು ಧರಿಸಿದವರು ಮಡಿ–ಮೈಲಿಗೆ. ರೇಷ್ಮೆ, ಉಣ್ಣೆಯ ಬಟ್ಟೆಗಳನ್ನು 'ಮಡಿ' ಎನ್ನಲಾಗುತ್ತದೆ. ಯಾವ ವಸ್ತ್ರದ ಮಡಿ–ಸ್ವಚ್ಛತೆ ಎಷ್ಟುದಿನ ಎಂಬ ಸಂಗತಿ ಶಾಸ್ತ್ರ ಹೇಳುತ್ತದೆ. ಹತ್ತಿ ಬಟ್ಟೆಗೆ ಒಂದೇ ದಿನ. ಕಂಬಳಿಯಾದರೆ ಮೂರು ದಿನ, ನಾರುಮಡಿಗೆ ಹದಿನೈದು ದಿನ.

ಕಾಳಗಟ್ಟದ – ತಿಂಗಳಾನುಗಟ್ಟಲೆ ಒಗೆಯದ 'ನಾರುಮಡಿ' ಉಟ್ಟು 'ಮಡಿ ಮಡಿ' ಎಂದು ಯಾರಾದರೂ ಹಾರಾಡಿದರೆ 'ಹಿಡಕೊಂಡು ಹೊಡಿ' ಎನ್ನಬೇಕು. ಪೂಜೆ, ಪುಣ್ಯಕಾರ್ಯ, ಅಡಿಗೆ, ಊಟಗಳಲ್ಲಿ ಜಾರಿ ಮಾಡುವ ಮಡಿಯ ಸಂಪ್ರದಾಯ ಆರೋಗ್ಯ–ಸ್ವಚ್ಛತೆಯ ದೃಷ್ಟಿಯಿಂದ, ತನ್ಮೂಲಕ ಮಾನಸಿಕ ಶಾಂತಿಯ ದೃಷ್ಟಿಯಿಂದ ನಡವಳಿಕೆಗೆ ಅಂಟಿಕೊಂಡಿದೆ. ಧಾರ್ಮಿಕ ಕಾರ್ಯಗಳಲ್ಲಿ ಮಡಿ ಎಂದು ಹೇಳುವ ಸ್ವಚ್ಛತೆಯನ್ನು ಆಸ್ಪತ್ರೆ, ಅದರಲ್ಲೂ ಶಸ್ತ್ರಚಿಕಿತ್ಸಾ ವಿಭಾಗ, ಸೂಕ್ಷ್ಮಯಂತ್ರಗಳ ಯಂತ್ರಾಗಾರ ಮುಂತಾದೆಡೆಗಳಲ್ಲಿ ಆಧುನಿಕ ರೀತಿಯಲ್ಲಿ 'ಸ್ವಚ್ಛತೆ' ಎಂಬ ಹೆಸರಿನಿಂದ ಕಾಣುತ್ತೇವೆ. ಬೂಟಾಟಿಕೆಯ ಮಡಿ ಸರಿಯಲ್ಲ. ಅರ್ಥವರಿತು ಆಚರಿಸುವ ಸ್ವಚ್ಛತೆ ಮಡಿ. ಈ ಮಡಿಗೆ ವಿರುದ್ಧವಾದುದೇ ಮೈಲಿಗೆ.

ಊರೆಲ್ಲ ಅಲೆದು ಕೈಕಾಲು ತೊಳೆಯದೆ ಅಡಿಗೆ ಮನೆಗೆ ನುಗ್ಗುವ ಮನೆಯ ಮಗನಾದರೂ ಆತ ಮೈಲಿಗೆಯೇ. ಕಕ್ಕಸಿಗೆ ಹೋಗಿ ಕೈಕಾಲು ತೊಳೆಯದೆ ಹಾಗೆ ಹಾಸಿಗೆಗೆ ಹೋಗುವುದು. ಮೈಲಿಗೆಯಲ್ಲವೆ? ತಿಂಗಳಾನುಗಟ್ಟಲೆ ಸ್ನಾನ ಮಾಡದೆ ಬಟ್ಟೆ ಬದಲಾಯಿಸದೆ, ಹಲ್ಲುಜ್ಜದೆ, ಕೂದಲು ಬಾಚದೆ ಇರುವಾತನನ್ನು 'ಹೊಲೆಯ' ನೆನ್ನದೆ ಇನ್ನೇನೆನ್ನಬೇಕು? ಇಂಥ ಹೊಲಸಿನಿಂದಲೇ ಹೊಲೆತನ ಬಂದಿದೆ. ಮೈಲಿಗೆ ಅಂದರೆ ಅದೇ–ಅಂಥದೇ:

ಅರ್ಥವರಿತು ಆಚರಿಸಿದರೆ ಆ ನಡವಳಿಕೆ ಮೂಢನಂಬಿಕೆಯಲ್ಲ. ತಿಕ್ಕಿ ತೊಳೆದು ಬೆಳಗಿದ ಪಾತ್ರೆಗೆ ಅಂತಿಮವಾಗಿ ಹುಣಿಸೆ ಹಣ್ಣು ಹಚ್ಚಿ ತೊಳೆದರೇನೇ ಮಡಿ – ಎಂಬ ರೂಢಿ ಇದೆ. ಈಚೆಗೆ ಅದು ವೈಜ್ಞಾನಿಕವಾಗಿಯೂ ಕ್ರಿಮಿನಾಶಕ, ಸೂಕ್ಷ್ಮಾಣುನಾಶಕವೆಂದು ಸಾಬೀತಾಗಿದೆ. ಹುಣಿಸೆಹಣ್ಣಿನಲ್ಲಿ 'ಆಂಟಿ ಬ್ಯಾಕ್ಟೀರಿಯಲ್' ಗುಣವಿರುವುದು ಈಚೆಗೆ ರುಜುವಾತಾದ ಸಂಗತಿಯಾದರೂ ನಮ್ಮ ನಡವಳಿಕೆಗಳಲ್ಲಿ ಅನುಭವದ ಬೆಂಬಲದಿಂದ ಜಾರಿಯಲ್ಲಿದೆ.

ಹಾಗೆಂದು ಬಾಣಂತಿಯನ್ನು ಹನ್ನೆರಡು ದಿನ ದೂರವಿಡುವುದು ಆಕೆಗೂ, ಎಳೆಯ ಶಿಶುವಿಗೂ ಆರೋಗ್ಯಕರವೇ ಆಗಿದೆ. ಹೆರಿಗೆಯಿಂದ ಹದಗೆಟ್ಟ ದೇಹಾರೋಗ್ಯ, ರೋಗ ನಿರೋಧಕ ಶಕ್ತಿಹೀನತೆ ಇರುವ ಹೆಣ್ಣಿನ ಸುತ್ತ ಊರ ಜನ ಸಂತಸ ವ್ಯಕ್ತಪಡಿಸಲು ಮುತ್ತಿದರೆ ಹಸಿಗೂಸು, ಹಸಿಬಾಣಂತಿ, ಬೇಗ ರೋಗಕ್ಕೆ ತುತ್ತಾಗುವುದು ಸಾಧ್ಯ. ವೈದ್ಯ

(25 ನೇ ಪುಟ ನೋಡಿ)

# ಅರಿವಿನ ಪಾರಮ್ಯ

—ಮುತ್ತೀಕೆರೆ ಅನಂತು.

[‘ಅರಿವಿನ ಪಾರಮ್ಯ’ ತಿಳಿಯ ಬೇಕಾದರೆ ನಾವು (ಯುವಪೀಳಿಗೆ) ಗುರುಗಳು ತತ್ತ್ವವನ್ನು ಹೇಳಿಕೊಡುವಾಗ ನಮಗೆ ಆದ ತಪ್ಪು ತಿಳುವಳಿಕೆಯನ್ನೇ ಸರಿಯೆಂದು, ನಾವೇ ನಿಶ್ಚಯಿಸಿ ಬಿಡಬಾರದು. ತಾಳ್ಮೆಯಿಂದ ಮತ್ತೆ ಅವರನ್ನೇ ಕೇಳಿ ಅವರ ಪೂರ್ಣಾಭಿಪ್ರಾಯವನ್ನು ತಿಳಿದುಕೊಳ್ಳಬೇಕು. ಹಾಗಿಲ್ಲದಿದ್ದರೆ ನಿಜವನ್ನು ತಿಳಿದಿದ್ದರಿಂದ ಆಗುವ ಸತ್‌ಫಲವು ಆಗುವುವಕ್ಕೆ ಬದಲಾಗಿ ತಪ್ಪುತಿಳಿವಳಿಕೆಯಿಂದಾಗುವ ಕೆಟ್ಟಫಲವೇ ನಮಗೆ ಬಂದೊದಗಬಹುದು. ಈ ಸಂದರ್ಭದಲ್ಲಿ ಪ್ರಜಾಪತಿ–ಇಂದ್ರರ ಸಂವಾದವನ್ನು ಅವಲೋಕಿಸೋಣ]

ಇಂದ್ರದೇವ: ಪೂಜ್ಯ ಪ್ರಜಾಪತಿಗಳೇ! ಪ್ರಣಾಮಗಳು. ನನಗೆ ಕೆಲವು ಸಂದೇಹಗಳು ಬಂದಿವೆ, ತಾವು ದಯೆ ಯಿಟ್ಟು ಪರಿಹಾರ ಮಾಡಿ ಕೊಡಬೇಕು......

ಪ್ರಜಾಪತಿ: ಆಶೀರ್ವಾದಗಳು; ಇಂದ್ರದೇವ ಅಗತ್ಯವಾಗಿ ಕೇಳು, ನಿನ್ನ ಸಂಶಯಗಳ ಸರಪಣಿಯನ್ನ ಪರಿಹಾರ ಮಾಡುವೆ......

ಇ : ನಮ್ಮ ಪ್ರಬಲ ಶತ್ರುಯಾರು?

ಪ್ರ: ನಮ್ಮ ಮನಸ್ಸೇ

ಇ : ಉತ್ತಮ ಮಿತ್ರನಾರು?

ಪ್ರ : ಸಜ್ಜನರು (ಸತ್ಸಂಗ)

ಇ : ಉತ್ತಮ ಧರ್ಮ ಯಾವುದು?

ಪ್ರ : ನಿಸ್ವಾರ್ಥ ಸೇವೆ

ಇ : ಮಹಾಕೆಟ್ಟ ನರಕ ಯಾವುದು?

ಪ್ರ : ನಮ್ಮ ದ್ವೇಷ, ಅಸೂಯೆ

ಇ : ಅಮೋಘ ಸ್ವರ್ಗ ಯಾವುದು?

ಪ್ರ: ಪ್ರೀತಿ, ಕರುಣೆ

ಇ : ಮಹಾಸುಖಿ ಯಾರು?

ಪ್ರ : ತ್ಯಾಗಗುಣವುಳ್ಳವನು

ಇ : ಭಿಕ್ಷುಕನಾರು?

ಪ್ರ : ಅತಿಆಸೆ-ಆಮಿಷಗಳಿಂದ ತುಂಬಿದವನು

ಇ : ನಿಜವಾದ ಕುಡುಕನಾರು?

ಪ್ರ: ಧನಮದ ವಿದ್ಯಾಮದದಿಂದ ಕೂಡಿದವನು

ಇ : ನಿಜವಾದ ಕುರುಡನಾರು?

ಪ್ರ: ಒಳಗಣ್ಣಿಲ್ಲದವನು

ಇ : ಒಳಗಣ್ಣನ್ನು ಕಾಣುವ ಬಗೆ ಹೇಗೆ?

ಪ್ರ : ‘ವೇದಾಂತ’ ದಿಂದ ಸಾಧ್ಯ

ಇ : ವೇದಾಂತ ಅಂದರೆ?

ಪ್ರ: ಅರಿವಿನ ಕೊನೆ

ಇ : ಈ ಅರಿವಿನ ಅಂತವನ್ನು ವಿಶದವಾಗಿ ತಿಳಿಸಿ ಕೊಡಿ ಪ್ರಜಾಪತಿಗಳೇ!

ಪ್ರ: ಹಾಗೇ ಆಗಲಿ ಇಂದ್ರದೇವ. ನೀನು ಅಲಂಕರಿಸಿಕೊಂಡು—ನೀರು ತುಂಬಿದ ಪಾತ್ರೆಯಲ್ಲಿ-ನಿನ್ನ ಪ್ರತಿಬಿಂಬವನ್ನು ವೀಕ್ಷಿಸಿ ಬಾ.........

ಇ: ಪ್ರಜಾಪತಿಯೆ! ನೋಡಿದೆ......ನನ್ನ ರೂಪ...ನನ್ನ ಪ್ರತಿಬಿಂಬವೇ...ನನ್ನ ಅಲಂಕೃತವಸ್ತ್ರವೇ ಕಾಣುತ್ತಿದೆ......

ಪ್ರ : ಅದೇ ಆತ್ಮ ... ಅದೇ ಬ್ರಹ್ಮವಸ್ತು...

ಇ: (ತನ್ನಲ್ಲಿ) ನನ್ನ ಪ್ರತಿಬಿಂಬ ಆತ್ಮವೇ? ನನ್ನರೂಪವೇ ಆತ್ಮವೇ? ಇಲ್ಲ...ಇಲ್ಲ; ದೇಹ ಕುರುಡಾಗಿದ್ದರೆ ಆತ್ಮವೂ ಕುರುಡೇ? ದೇಹ ಅಂಗವಿಕಲತೆ ಆದರೆ—ಆತ್ಮವೂ ನಾಶ ಹೊಂದುವುದೇ? ಸಾಧ್ಯವಿಲ್ಲ......ದೇಹ ಆತ್ಮವಲ್ಲ ಸುಳ್ಳು (ಪ್ರಕಾಶ) ಪೂಜ್ಯ ಪ್ರಜಾಪತಿಗಳೇ... ತಮ್ಮ ಉತ್ತರ ಸಂಶಯ ತಂದಿದೆ... ದೇಹವು—ಆತ್ಮವಾಗಲು ಸಾಧ್ಯವಿಲ್ಲ...

ಪ್ರ : ಸರಿ! ಕನಸಿನಲ್ಲಿ ಆತ್ಮವಿದೆಯಲ್ಲಾ ಅದೇ ಆತ್ಮ ಎಂದು ತಿಳಿ ಇಂದ್ರದೇವ

ಇ : ಭಗವನ್ ಪುನಃ ಸಂಶಯ......ದೇಹ ಕುರುಡಾಗಿದ್ದಾಗ—ಕನಸಿನ ಆತ್ಮವೂ ಕುರುಡಾಗಿ ಕಾಣುವುದಿಲ್ಲ; ಈ ದೇಹ ಕಣ್ಣೀರು ಸುರಿಸಿದರೆ-ಕನಸಿನ ಆತ್ಮವೂ ಕಣ್ಣೀರು ಸುರಿಸುವುದಿಲ್ಲ; ಇದು ಹೇಗೆ?

ಪ್ರ : ನಿಜ ಇಂದ್ರದೇವ, ಈ ದೇಹ ಕಾಲವಶ. ದೇಹಯುಕ್ತವಾದ ಆತ್ಮನು—ಸುಖ—ದುಃಖಕ್ಕೆ ಅಧೀನ. ಈ ದೃಷ್ಟಿಯಿಂದ ಆತ್ಮನು ‘ಸಾಕ್ಷಿ’. ಈತನು ದೇಹ ಮನಸ್ಸು-ಇಂದ್ರಿಯಾತೀತ... ಹೀಗೆ ನಿನ್ನ ಚಿಂತನೆಯನ್ನು ಹರಿಗೊಡು...ನಿನಗೆ ಆತ್ಮಾನುಭವವಾಗುವುದು.

ಇ: (ಚಿಂತಿಸುತ್ತ) ...... ಅಬ್ಬಾ! ಆಹಾ! ದರ್ಶನ! ಪ್ರಜಾಪತಿಗಳೇ—ಆತ್ಮಾನುಭವವಾಯಿತು......

ಪ್ರ : ಎಲ್ಲಿ ಹೇಳು...ಆ ದಿವ್ಯಾನುಭವವನ್ನು

ಇ: ಸಾಧ್ಯವಾಗದು! ಅದು ದೇಹವಾಸನೆ - ಶಾಸ್ತ್ರವಾಸನೆ - ಲೋಕವಾಸನೆ - ಮೀರಿದ ಅನುಭವ! ಬ್ರಹ್ಮದೇವಾ!

ಪ್ರ : ಆತ್ಮಾನುಭವವನ್ನು ಅನುಭವಿಸಬೇಕು; ಹೇಳಲು ಸಾಧ್ಯವಾಗದು... ಅದು “ವಾಸನಾಕ್ಷಯ ಮೋಕ್ಷ”ದ ಹಾಗೇ. ಅದೇ ಅರಿವಿನ ಅಂತ; ಅದೇ ವೇದಾಂತ (ಪ್ರಜ್ಞಾನ). ಅರಿವಿಗೆ ಹೊಳೆಯಿತೇ ಇಂದ್ರದೇವ......

ಇ: ಅನುಗ್ರಹೀತನಾದೆ ಪ್ರಜಾಪತಿಗಳೇ!

(ಆಧಾರ—ಛಾಂದೋಗ್ಯ)

—

# ದಶಲಕ್ಷಣ ಧರ್ಮ

— ಪ್ರೊ. ಕೆ. ಟಿ. ಪಾಂಡುರಂಗಿ.

ಹಿಂದೂ ಧರ್ಮಶಾಸ್ತ್ರಕಾರರು ಮಾನವನು ಉತ್ತಮರೀತಿಯಿಂದ ಬಾಳಲು ಕೆಲವು ಮುಖ್ಯವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಆಯಾ ವರ್ಗ ಮತ್ತು ಆಶ್ರಮದವರು ಅನುಸರಿಸಬೇಕಾದ ಕರ್ತವ್ಯಗಳಲ್ಲದೆ, ಎಲ್ಲ ವರ್ಣದವರೂ ಎಲ್ಲ ಆಶ್ರಮದವರೂ ಅನುಸರಿಸಬೇಕಾದ, ಸಮಗ್ರ ಮಾನವ ಸಮಾಜವೆಲ್ಲ ಅನುಸರಿಸಬೇಕಾದ ಕೆಲವು ಧರ್ಮಗಳನ್ನು ಹೇಳಿದ್ದಾರೆ. ಇವುಗಳನ್ನು ಮನುಸ್ಮೃತಿಯಲ್ಲಿ ದಶಲಕ್ಷಣಧರ್ಮವೆಂದು ಕರೆದಿದ್ದಾರೆ. ಈ ಧರ್ಮದ ಅಂಗವಾಗಿ ಹತ್ತು ಸದ್ಗುಣಗಳನ್ನು ಬೆಳೆಸಿಕೊಳ್ಳಲು ಹೇಳಿದ್ದರಿಂದ ಇದನ್ನು ದಶಲಕ್ಷಣಧರ್ಮ ಎಂದು ಕರೆದಿದ್ದಾರೆ.

ಧೃತಿಃ ಕ್ಷಮಾ ದಮೋಽಸ್ತೇಯಂ
ಶೌಚಮಿಂದ್ರಿಯ ನಿಗ್ರಹಃ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ
ಧರ್ಮಲಕ್ಷಣಮ್।

ಧೃತಿ ಅಂದರೆ ಸಂತೋಷದಿಂದಿರುವುದು; (ಅಂದರೆ ಅತಿ ಆಸೆಯಿಂದ ಅತೃಪ್ತಿಯನ್ನೂ ಜುಗುಪ್ಸೆಯನ್ನೂ ತಂದುಕೊಳ್ಳದೆ ಇರುವುದು), ಕ್ಷಮಾಗುಣವುಳ್ಳವನಾಗಿರುವುದು; (ಅಂದರೆ ಅಪಕಾರಮಾಡಿದವನಿಗೆ ತಿರುಗಿ ಅಪಕಾರವನ್ನು ಮಾಡುವ ಸೇಡಿನ ಬುದ್ಧಿಯನ್ನು ತಾಳದೇ ಇರುವುದು. ಅಪಕಾರವನ್ನು ತಡೆಗಟ್ಟಲು ಅಡ್ಡಿಯಿಲ್ಲ,ಆದರೆ ಸೇಡಿನ ಬುದ್ಧಿಯಿಂದ ಪ್ರತಿ-ಅಪಕಾರವನ್ನು ಮಾಡಬಾರದು), ದಮ ಅಂದರೆ ಮನಸ್ಸು ವಿಕಾರಹೊಂದದಂತೆ ನೋಡಿಕೊಳ್ಳುವುದು, (ಅಥವಾ ಸುಖ-ದುಃಖಗಳನ್ನು ಧೈರ್ಯದಿಂದ ಎದುರಿಸುವುದು, ಇದನ್ನು ತಿತಿಕ್ಷಾಗುಣವೆಂದೂ ಕರೆಯುವರು.) ಅಸ್ತೇಯ ಅಂದರೆ ಅನ್ಯಾಯದಿಂದ ಪರಕೀಯರ ಸ್ವತ್ತನ್ನು ತೆಗೆದುಕೊಳ್ಳದೇ ಇರುವುದು; (ಕೇವಲ ಚೌರ್ಯ ಮಾಡದೇ ಇರುವುದು-ಇಷ್ಟೇ ಅಸ್ತೇಯದ ಅರ್ಥವಲ್ಲ. ಆದರೆ ಅನ್ಯಾಯದಿಂದ ಯಾವ ರೀತಿಯಿಂದಲೂ ಪರಸ್ವತ್ತನ್ನು ಅಪಹರಿಸದೇ ಇರುವುದು) ಶೌಚ ಅಂದರೆ ಶರೀರ, ಮನಸ್ಸು ಮತ್ತು ಮಾತುಗಳು ಶುಚಿಯಾಗಿರುವುದು, ಇಂದ್ರಿಯನಿಗ್ರಹ ಕಣ್ಣು, ಕಿವಿ ಮೊದಲಾದ ಇಂದ್ರಿಯಗಳನ್ನು ದುಷ್ಟ ಕಾರ್ಯಗಳ ಕಡೆಗೆ ಪ್ರವರ್ತಿಸದಂತೆ – ಅಂಕಿತದಲ್ಲಿಟ್ಟುಕೊಳ್ಳುವುದು, ಧೀ ಅಂದರೆ ವಿವೇಕ (ಸದಸದ್ವಿವೇಕಬುದ್ಧಿಯು) ವಿದ್ಯಾ ಅಂದರೆ ಆತ್ಮವಿದ್ಯೆ ತತ್ತ್ವಜ್ಞಾನ. ಈ ಹತ್ತು ವಿಧವಾದ ಧರ್ಮವನ್ನು ಎಲ್ಲ ಮಾನವರೂ ಆಚರಿಸಬೇಕು. ಈ ಸದ್ಗುಣಗಳನ್ನೂ ಬೆಳೆಸಿಕೊಂಡಾಗಲೇ ಮಾನವನು ಪಶುಗಳಿಗಿಂತ ಭಿನ್ನನಾಗಿ ಸಮಾಜವನ್ನು ಕಟ್ಟಿಕೊಂಡು ಬಾಳಲು ಯೋಗ್ಯನಾಗುವನು. ಇವಿಲ್ಲದೆ ಅವನು ಮಾಡುವ ಪೂಜಾದಿ ಧರ್ಮಗಳೂ ವ್ಯರ್ಥ, ವ್ಯಾಪಾರ-ವ್ಯವಹಾರಾದಿ ಜೀವನೋಪಾಯಗಳೂ ವ್ಯರ್ಥ, ಸಮಾಜ-ಸುಧಾರಣೆ ರಾಷ್ಟ್ರನಿರ್ಮಾಣ ಇತ್ಯಾದಿ ರಾಜಕೀಯ ವ್ಯವಹಾರಗಳೂ ವ್ಯರ್ಥ. ತಾನು ಉತ್ತಮ ಜೀವಿಯಾಗಿದ್ದೇನೆ ಎಂಬ ಆತ್ಮಗೌರವ ಮತ್ತು ಆತ್ಮವಿಶ್ವಾಸವಿಲ್ಲದೆ ಜೀವನಕ್ಕೆ ತೃಪ್ತಿಯೂ ಸಾರ್ಥಕ್ಯವೂ ದೊರೆಯಲಾರವು. ಈ ದಶಲಕ್ಷಣಧರ್ಮವನ್ನೇ ಇನ್ನೂ ಸಂಕ್ಷಿಪ್ತವಾಗಿ,

ಅಹಿಂಸಾ ಸತ್ಯಮಸ್ತೇಯ
ಶೌಚಮಿಂದ್ರಿಯ ನಿಗ್ರಹಃ।
ಏತಂ ಸಾಮಾಸಿಕಂ ಧರ್ಮಂ
ಚಾತುರ್ವರ್ಣ್ಯೇಽಬ್ರವೀತ್ ಮನುಃ॥
(10–63)

ಅಹಿಂಸೆ, ಸತ್ಯ, ಅಸ್ತೇಯ, ಶೌಚ, ಇಂದ್ರಿಯನಿಗ್ರಹ ಈ ಐದೂ ಧರ್ಮದ ಸಾರರೂಪವಾದವು ಎಂದು ಹೇಳಿದ್ದಾನೆ. ಇವು ಎಲ್ಲ ವರ್ಣದವರಿಗೂ ಎಲ್ಲ ಮಾನವರಿಗೂ ಅನ್ವಯಿಸುತ್ತವೆ ಎಂದು ಹೇಳಿದ್ದಾನೆ. ಪೂಜಾದಿಗಳೇ ಪ್ರಧಾನವೆಂದು ತಿಳಿದ ಆಸ್ತಿಕರು ಈ ಮಾನವಧರ್ಮವನ್ನು ಒಂದು ರೀತಿಯಿಂದ ಉದಾಸೀನ ಮಾಡುತ್ತಿದ್ದರೆ, ನಾಸ್ತಿಕರು ಇನ್ನೊಂದು ರೀತಿಯಿಂದ ತಿರಸ್ಕಾರ ಮಾಡುತ್ತಾರೆ. ಅಂತೂ ಇಬ್ಬರೂ ಹೇಗಾದರೂ ಮಾಡಿ ಈ ಮೂಲಭೂತಧರ್ಮವನ್ನು ತಪ್ಪಿಸಿ ತಾವು ಇನ್ನೂ ಪಶುಗಳಿಗಿಂತ ಉತ್ತಮರಾಗಿಲ್ಲ ಎಂಬುದನ್ನು ವ್ಯಕ್ತಪಡಿಸುತ್ತಾರೆ. ಆಧುನಿಕ ಮಾನವನಂತೂ ಇವುಗಳನ್ನು ತಪ್ಪಿಸದಿದ್ದರೆ ಬದುಕುವುದೇ ಕಷ್ಟವೆನ್ನುವಷ್ಟು ಈ ಮೂಲಭೂತ ಮಾನವಧರ್ಮದಲ್ಲಿ ಅವಿಶ್ವಾಸವುಳ್ಳವನಾಗಿದ್ದಾನೆ.

ಈ ದಶಲಕ್ಷಣಧರ್ಮವನ್ನು ಹೇಳಿದ ಮನುವು ಮಾನವನು ಎಚ್ಚರಿಕೆಯಿಂದ ಬಿಡಬೇಕಾದ ಹತ್ತು ದೋಷಗಳನ್ನೂ ಹೇಳಿದ್ದಾನೆ.

ಪರದ್ರವ್ಯೇಷ್ವಭಿಧ್ಯಾನಂ
ಮನಸಾಽನಿಷ್ಟಚಿಂತನಮ್।
ವಿತಥಾಭಿನಿವೇಶಶ್ಚ ತ್ರಿವಿಧಂ
ಕರ್ಮಮಾನಸಮ್॥ (12–5)

ಬೇರೆಯವರ ಸ್ವತ್ತಿಗೆ ಯಾವಾಗಲೂ ಆಸೆಪಡುವುದು, ಮನಸ್ಸಿನಲ್ಲಿ ಯಾವಾಗಲೂ ಬೇರೆಯವರಿಗೆ ಅನಿಷ್ಟವಾಗಲೆಂದು ಆಲೋಚಿಸುವುದು, ಸುಳ್ಳು ಆಗ್ರಹ ಹಿಡಿಯುವುದು ಇವು ಮೂರು ಮಾನಸಿಕ ದುಷ್ಕರ್ಮಗಳು.

ಪಾರುಷ್ಯಮನೃತಂಚೈವ
ಪೈಶುನಂ ಚಾಪಿ ಸರ್ವಶಃ।
ಅಸಂಬದ್ಧ ಪ್ರಲಾಪಶ್ಚ ವಾಙ್ಮಯಂ
ಸ್ಯಾಚ್ಚತುರ್ವಿಧಮ್॥ (12–6)

ಕೆಟ್ಟಮಾತುಗಳನ್ನು ಆಡುವುದು, ಸುಳ್ಳು ಹೇಳುವುದು, ಚಾಡಿಹೇಳುವುದು, ಅಸಂಬದ್ಧವಾಗಿ ವಾದಿಸುವದು ಇವು ನಾಲ್ಕು ಮಾತಿನ ದುಷ್ಕರ್ಮಗಳು.

ಅದತ್ತಾನಾಮುಪಾದಾನಂ
ಹಿಂಸಾಚೈವಾವಿಧಾನತಃ।
ಪರದಾರೋಪಸೇವಾ ಚ
ಶಾರೀರಂ ತ್ರಿವಿಧಂ ಸ್ಮೃತಮ್॥ (12–7)

ಬೇರೆಯವರ ಆಸ್ತಿಯನ್ನು ಬಲಾತ್ಕಾರದಿಂದ ತೆಗೆದುಕೊಳ್ಳುವುದು, ಬೇರೆಯವರನ್ನು ಕಾನೂನಿಗೆ ವಿರುದ್ಧವಾಗಿ ಹಿಂಸಿಸುವುದು, ಪರಸ್ತ್ರೀಯರನ್ನು ಆಕ್ರಮಿಸುವುದು ಇವು ಮೂರು ಶಾರೀರಿಕ ದುಷ್ಕೃತ್ಯಗಳು.

ಈ ಹತ್ತು ದುಷ್ಕೃತ್ಯಗಳನ್ನು ಎಲ್ಲರೂ ಪರಿತ್ಯಜಿಸಬೇಕೆಂದು ಮನುವು ಹೇಳುತ್ತಾನೆ. ಮೇಲಿನ ಹತ್ತು ಗುಣಗಳನ್ನು ಬೆಳೆಯಿಸಿಕೊಳ್ಳುವುದೂ ಈ ಹತ್ತು ದೋಷಗಳನ್ನು ಬಿಡುವುದೂ ಮಾನವನನ್ನು ಸುಸಂಸ್ಕೃತನನ್ನಾಗಿ ಮಾಡುವುವು. ಆದರೆ ಇಂದು ನಾವು ಕಾಣುತ್ತಿರುವುದೇನು? ಈ ಹತ್ತು ದೋಷಗಳನ್ನು ಹೊತ್ತಿರುವುದೇ ಸರ್ವರ ಲಕ್ಷಣವಾಗಿದೆ. ಇದು ಧರ್ಮದ ಬಗ್ಗೆ ಇರುವ ಉದಾಸೀನ ಮತ್ತು ತಿರಸ್ಕಾರಬುದ್ಧಿಯಿಂದಲೇ ಉಂಟಾಗಿದೆ. ಮಾನವನ ಅಭಿವೃದ್ಧಿಗೆ ಧರ್ಮದ ಅಗತ್ಯವಿಲ್ಲ ಎಂಬ ತಪ್ಪುಕಲ್ಪನೆಯಿಂದಲೇ ಉಂಟಾಗಿದೆ.ವಿಜ್ಞಾನ,ತಂತ್ರಜ್ಞಾನ, ಉದ್ಯೋಗ-ವ್ಯವಹಾರಗಳ,ಆರ್ಥಿಕ ಅಭಿವೃದ್ಧಿ ಮಾನವನನ್ನು ತಿದ್ದಲಾರವು. ಅವನನ್ನು ಸಂಸ್ಕಾರವಂತನನ್ನಾಗಿ ಮಾಡಲಾರವು. ಒಳ್ಳೆಯ ನಾಗರಿಕನನ್ನಾಗಿ ಮಾಡಲಾರವು. ಧರ್ಮವೇ ಅವನಿಗೆ ತಾರಕ. ಕೇವಲ ಪೂಜಾದಿಗಳನ್ನು ಧರ್ಮವೆಂದು ತಿಳಿದು ದಶದೋಷಗಳನ್ನು ಮಾಡಿ ಮುಚ್ಚಿಕೊಳ್ಳಲು ಧರ್ಮವು ಕಾಪಾಡಲಾರದು. ದಶಲಕ್ಷಣಧರ್ಮದ ಒಳ್ಳೆಯ ಗುಣಗಳನ್ನು ಬೆಳೆಯಿಸಿಕೊಂಡು ನೀತಿವಂತನಾದವನು ಮಾಡಿದ ಪೂಜಾದಿಗಳೇ ಸಫಲವಾಗುವುವು. ದುಶ್ಚರಿತನು ಮಾಡಿದ ಪೂಜಾದಿಗಳು ಧರ್ಮವಲ್ಲ. ಸದಾಚಾರ ಮತ್ತು ಪೂಜಾದಿಗಳು ಒಂದಕ್ಕೊಂದು ಪ್ರೇರಕವಾಗಬೇಕು. ಇದುವೇ ಮೂಲಧರ್ಮ, ಮಾನವಧರ್ಮ.

# ಸ್ವಾಮಿ ರಾಮತೀರ್ಥ

ಭಾರತ ಪುಣ್ಯಭೂಮಿ. ವಿಶ್ವದಲ್ಲಿಯೇ ಅತಿ ಪ್ರಾಚೀನವಾದ ಸಂಸ್ಕೃತಿಯ ತಳಹದಿಯ ಮೇಲೆ ನಮ್ಮ ಭಾರತೀಯ ಸಮಾಜ ನೆಲೆಗೊಂಡಿದೆ. ಸಹಸ್ರ ಸಹಸ್ರ ವರ್ಷಗಳಿಂದಲೂ ನಮ್ಮ ನೀತಿ ಧರ್ಮ, ವೇದಾಂತ ಸಂಸ್ಕೃತಿಗಳು ಅವಿಚ್ಛಿನ್ನವಾಗಿ ಹರಿದು ಬರುತ್ತಿದ್ದರೂ, ಆಗಾಗ್ಗೆ ಧರ್ಮಕ್ಕೆ ಚ್ಯುತಿ ಒದಗಿ ನಮ್ಮ ಸಂಸ್ಕೃತಿಯ ಅಡಿಗಲ್ಲು ಅಲುಗಾಡುವ ಸ್ಥಿತಿ ಒದಗಿ, ಅಂತಹ ಸಂದರ್ಭಗಳಲ್ಲಿ ಧರ್ಮ ಸಂಸ್ಥಾಪನಾರ್ಥವಾಗಿ ವಿಭೂತಿ ಪುರುಷರು ಜನಿಸಿ, ಶಿಲವಾಗುತ್ತಿರುವ ಧರ್ಮವನ್ನು ಪುನಶ್ಚೇತನಗೊಳಿಸಿ ಜನತೆಯನ್ನು ಕತ್ತಲಿನಿಂದ ಬೆಳಕಿನೆಡೆಗೆ ಕರೆದೊಯ್ಯುವರು. ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು, ರಮಣ ಮಹರ್ಷಿಗಳು ಮತ್ತು ಮಹಾಯೋಗಿ ಅರವಿಂದರು–ಇಂತಹವರು ಮಹಾನ್ ಕಾರ್ಯವನ್ನು ನಡೆಸಿ ಭಾರತೀಯರ ಹೃನ್ಮಂದಿರಗಳಲ್ಲಿ ಶಾಶ್ವತ ಸ್ಥಾನ ಗಳಿಸಿದ್ದಾರೆ. ಅಂತಹವರ ಸಾಲಿನಲ್ಲಿ ಸ್ವಾಮಿರಾಮತೀರ್ಥರು ಒಬ್ಬ ಶ್ರೇಷ್ಠ ಮಹಾಪುರುಷರಾಗಿ ಪರಮಪೂಜ್ಯ ವ್ಯಕ್ತಿಗಳಾಗಿದ್ದಾರೆ.

ಕ್ರಿ.ಶ. 1873 ನೆಯ ಅಕ್ಟೋಬರ್ 22ನೆಯ ತಾರೀಖಿನ ದಿನ ಪಶ್ಚಿಮ ಪಂಜಾಬಿನ ಗುಜರನವಾಲಾ ಜಿಲ್ಲೆಯ ಮುರಲೀವಾಲ ಎಂಬಲ್ಲಿ ತೀರ್ಥರಾಮರು ಜನಿಸಿದರು. ಅವರ ತಂದೆ ಹೀರಾನಂದ ಗೋಸ್ವಾಮಿ. ಹುಟ್ಟಿದ ಮಗುವಿನ ಜಾತಕವನ್ನು ಬರೆದ ಪ್ರಸಿದ್ಧ ಜ್ಯೋತಿಷಿ ತೀರ್ಥರಾಮರು ತಾವು ಮನಸ್ಸಿನಲ್ಲಿಯೇ ವ್ಯಥೆಪಡುತ್ತ, "ಈ ಮಗುವು ಅಲ್ಪಾಯುಷಿ, ತಾಯಿ ಬಹಳ ಕಾಲ ಬದುಕುವುದಿಲ್ಲ. ಆದರೆ ತನ್ನ ಜೀವಿತದ ಅಲ್ಪ ಅವಧಿಯಲ್ಲಿಯೇ ಈ ಮಗು ಅಸಾಧಾರಣ ಪ್ರತಿಭಾಶಾಲಿಯಾಗಿ ಮಹಾಪುರುಷನೆನಿಸಿಕೊಂಡು ತಾನು ಹುಟ್ಟಿದ ವಂಶಕ್ಕೆ ಕೀರ್ತಿ ತರುತ್ತಾನೆ" ಎಂದು ತಂದೆ ತಾಯಿಗಳಿಗೆ ನುಡಿದರು. ಅವರ ಭವಿಷ್ಯವಾಣಿ ಸತ್ಯವಾಯಿತು. ಸ್ವಾಮಿ ರಾಮತೀರ್ಥರು ಕೇವಲ ಮೂವತ್ತು ಮೂರು ವರ್ಷ ಕಾಲ ಬದುಕಿದ್ದರೂ, ಅವರ ಸಾಧನೆ ಸಿದ್ಧಿಗಳು ಹಿಮಾಲಯದಷ್ಟು ಉನ್ನತವಾಗಿದ್ದವು. ಆರ್ಯ ಸಂಸ್ಕೃತಿಯ ಉದ್ಧಾರಕರಾಗಿ, ವೇದಾಂತ ಕೇಸರಿಯಾಗಿ, ಸಮಾಜ ಸುಧಾರಕರಾಗಿ ಗಣಿತ ಶಾಸ್ತ್ರಜ್ಞರಾಗಿ, ಭಾರತೀಯರ ದೃಷ್ಟಿಯಲ್ಲಿ ಮಹಾತ್ಮರಾದುದಲ್ಲದೆ, ಪಾಶ್ಚಾತ್ಯ ರಾಷ್ಟ್ರಗಳಿಗೂ ಭೇಟಿ ನೀಡಿ, ಭಾರತದ ಕೀರ್ತಿಯನ್ನು ಬೆಳಗಿದರು.

**ಶ್ರೀ ಚಿ.ನ. ಕೃಷ್ಣಮೂರ್ತಿ**

ಬಾಲಕ ತೀರ್ಥರಾಮರ ಪ್ರಾಥಮಿಕ ವಿದ್ಯಾಭ್ಯಾಸ ಹುಟ್ಟೂರಿನಲ್ಲಿಯೇ ನಡೆಯಿತು. ಪ್ರೌಢಶಾಲೆಯ ಶಿಕ್ಷಣಕ್ಕಾಗಿ ಗುಜರನವಾಲಾಗೆ ತೆರಳಿದರು. ತಮ್ಮ ಹದಿನೈದನೆಯ ವಯಸ್ಸಿನಲ್ಲಿ ಮೆಟ್ರಿಕ್ಯುಲೇಷನ್ ಪರೀಕ್ಷೆಯನ್ನು ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿ ತಮ್ಮ ಪ್ರತಿಭೆಯನ್ನು ಮೆರೆದರು. ಕಾಲೇಜು ಶಿಕ್ಷಣ ತೀರ್ಥರಾಮರಿಗೆ ಗಗನಕುಸುಮವೇ ಆಗಿತ್ತು. ಏಕೆಂದರೆ ತಂದೆ ಕಡು ಬಡತನವನ್ನು ಅನುಭವಿಸುತ್ತಿದ್ದು ಮಗನ ವಿದ್ಯಾಭ್ಯಾಸಕ್ಕೆ ಯಾವ ಸಹಾಯವನ್ನೂ ಮಾಡುವಂತಿರಲಿಲ್ಲ. ಆದರೆ ದೈವಕೃಪೆಯಿಂದ ಇವರಿಗೆ ಒಬ್ಬರ ಆಶ್ರಯ ದೊರೆಯಿತು. ಆತನ ಹೆಸರು ಭಗತ್ ಧನ್ನಾರಾಮ ಎಂದು. ಅವರು ಸಾತ್ವಿಕ ಸ್ವಭಾವದ ಕರುಣಾಮೂರ್ತಿಯಾಗಿದ್ದರು. ತೀರ್ಥರಾಮರು ಅವರ ನೆರವಿನಿಂದ ಶಿಕ್ಷಣವನ್ನು ಮುಂದುವರಿಸುವುದರ ಜೊತೆಗೆ ಅವರ ಆಧ್ಯಾತ್ಮಿಕ ವಿಚಾರ, ಧರ್ಮಶ್ರದ್ಧೆ ಇವುಗಳಿಂದ ಬಹಳಷ್ಟು ಪ್ರಭಾವಿತರಾದರು. ತೀರ್ಥರಾಮರು ತಮ್ಮ ವಿದ್ಯಾರ್ಥಿ ದೆಸೆಯಲ್ಲಿ ದೇವರನ್ನು ಕುರಿತು ಹೀಗೆ ಪ್ರಾರ್ಥಿಸುತ್ತಿದ್ದರು. "ದಯಾಮಯನಾದ ಭಗವಂತನೆ, ನನ್ನ ವ್ಯಾಸಂಗವನ್ನು ನಡೆಸಲು ಏಕಾಂತ ಸ್ಥಳ, ಸಾಕಷ್ಟು ಸಮಯ ಮತ್ತು ಜ್ಞಾನವನ್ನು ಹೊಂದಬೇಕೆಂಬ ತೀವ್ರವಾದ ಬಯಕೆ, ಇವುಗಳನ್ನು ಕರುಣಿಸು."

ತೀರ್ಥರಾಮರು ಗಣಿತ ಶಾಸ್ತ್ರವನ್ನು ಐಚ್ಛಿಕ ವಿಷಯವನ್ನಾಗಿ ಆರಿಸಿಕೊಂಡು ಬಿ.ಎ. ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು. ಅವರು ಒಂದು ಸಂದರ್ಭದಲ್ಲಿ ತಾವು ಗುರುಗಳು ಎಂದು ಭಾವಿಸಿದ್ದ ಧನ್ನಾರಾಮ ಅವರಿಗೆ ಪತ್ರ ಬರೆಯುತ್ತ "ದೃಢವಾದ ಮನೋ ನಿರ್ಧಾರ ಮತ್ತು ಆತ್ಮಶಕ್ತಿಗಳಷ್ಟು ಅಮೂಲ್ಯವಾದದ್ದು ವಿಶ್ವದಲ್ಲಿ ಮತ್ತೊಂದಿಲ್ಲ"–ಎಂದಿದ್ದಾರೆ. ತೀರ್ಥರಾಮರಲ್ಲಿ ಈ ಎರಡು ಗುಣಗಳು ಮೇಳವಿಸಿದ್ದರಿಂದಲೆ ಅವರು ಮಹತ್ ಕಾರ್ಯಗಳನ್ನು ಸಾಧಿಸುವಂತಾಯಿತು. ಇವರು ತಮ್ಮ ಇಪ್ಪತ್ತನೇ ವಯಸ್ಸಿನಲ್ಲಿ ಎಂ.ಎ ಪರೀಕ್ಷೆಯಲ್ಲಿ ಲಾಹೋರ್ ಪ್ರಾಂತ್ಯಕ್ಕೆ ಮೊದಲಿಗರಾಗಿ ತೇರ್ಗಡೆಯಾದರು. ಗಣಿತ ಶಾಸ್ತ್ರದಲ್ಲಿ ಇವರದು ಅದ್ಭುತ ಪ್ರತಿಭೆಯಾಗಿತ್ತು. ತತ್ತ್ವಶಾಸ್ತ್ರ, ಆಧ್ಯಾತ್ಮಿಕ ವಿಚಾರಗಳಲ್ಲಿ ವಿಶೇಷವಾದ ಆಸಕ್ತಿ ತಳೆದಿದ್ದು ಭಾರತೀಯ ದರ್ಶನ ಗ್ರಂಥಗಳು ತಾತ್ತ್ವಿಕ ಗ್ರಂಥಗಳೊಂದಿಗೆ ಪಾಶ್ಚಾತ್ಯ ತತ್ತ್ವ ಗ್ರಂಥಗಳೆಲ್ಲವನ್ನೂ ಅಮೂಲಾಗ್ರವಾಗಿ ಅಧ್ಯಯನ ಮಾಡಿ ಅಪಾರವಾದ ಪಾಂಡಿತ್ಯಗಳಿಸಿದರು. ಅವರ ಭಾಷಾ ಸಾಮರ್ಥ್ಯ ಬೆರಗುಗೊಳಿಸುವಂತಹದು. ಪರ್ಷಿಯನ್, ಇಂಗ್ಲೀಷ್, ಹಿಂದಿ, ಸಂಸ್ಕೃತ, ಉರ್ದು ಭಾಷೆಗಳಲ್ಲಿ ವಿದ್ವಾಂಸರಾಗಿದ್ದರು. ಇವರಿಗೆ ಬಹುಪ್ರಿಯವಾದ ಗ್ರಂಥಗಳೆಂದರೆ ಭಗವದ್ಗೀತೆ ಮತ್ತು ಯೋಗವಾಸಿಷ್ಠ. "ಪ್ರಪಂಚದಲ್ಲೇ ಅತಿ ಶ್ರೇಷ್ಠವಾದ ಗ್ರಂಥಗಳಲ್ಲಿ ಯೋಗವಾಸಿಷ್ಠವೂ ಒಂದು. ಈ ಶ್ರೇಷ್ಠ ಕೃತಿಯನ್ನು ಇಡೀ ಪ್ರಪಂಚದಲ್ಲಿ ಯಾರೇ ಓದಿದರೂ ಅವರಲ್ಲಿ ಭಗವಂತನ ಮೇಲಿನ ಭಕ್ತಿ ಭಾವನೆ ಸಂಚಾರವಾಗುತ್ತದೆ" ಎಂದಿದ್ದಾರೆ.

1894 ರಲ್ಲಿ ತೀರ್ಥರಾಮರು ಲಾಹೋರ್ ಮಿಷನ್ ಕಾಲೇಜಿನಲ್ಲಿ ಗಣಿತ ಶಾಸ್ತ್ರದ ಅಧ್ಯಾಪಕರಾಗಿ ನೇಮಕಗೊಂಡು 1896ರ ವೇಳೆಗೆ ಗಣಿತ ಶಾಸ್ತ್ರದ ಪ್ರಾಧ್ಯಾಪಕರಾದರು. ಕಠಿಣವಾದ ವಿದ್ಯಾರ್ಥಿ ದೆಸೆಯಿಂದ ಕ್ಷೀಣವಾಗಿದ್ದ ಅವರ ದೇಹಸ್ಥಿತಿ ಈ ಅವಧಿಯಲ್ಲಿ ಸುಧಾರಿಸಿತು. ಒಳ್ಳೆಯ ಆಹಾರ, ವ್ಯಾಯಾಮ ಇವುಗಳಿಂದ ಉತ್ತಮ ಶರೀರ ದಾರ್ಢ್ಯವನ್ನು ಬೆಳೆಸಿಕೊಂಡರು. ಪ್ರಾಧ್ಯಾಪಕರಾಗಿ ತಮ್ಮ ಅಸಾಧಾರಣ ಪ್ರತಿಭೆ, ಸರಳವಾದ ಬೋಧನ ಮಾರ್ಗ, ಶಿಷ್ಯರಲ್ಲಿ ಅಪಾರ ಪ್ರೀತಿ ವಿಶ್ವಾಸ, ಇವುಗಳಿಂದ ಅವರು ಎಲ್ಲರ ಮನ್ನಣೆಗೂ ಪಾತ್ರರಾಗಿ ಆದರ್ಶ ಪ್ರಾಧ್ಯಾಪಕರಾಗಿದ್ದರು. ಒಂದು ದೊಡ್ಡ ಸಭೆಯಲ್ಲಿ 'ಗಣಿತದ ಪ್ರಾಧಾನ್ಯತೆ' ಎಂಬ ವಿಷಯವಾಗಿ ಮಾತನಾಡುತ್ತ "ಅಪೂರ್ವ ರೀತಿಯಲ್ಲಿ ಗಣಿತ ಶಾಸ್ತ್ರ ಧರ್ಮಕ್ಕೆ ಸಹಾಯ ಮಾಡುತ್ತದೆ ಮತ್ತು ನಮ್ಮ ನೈತಿಕತೆಯ ಅಡಿಪಾಯವನ್ನು ಭದ್ರಗೊಳಿಸುತ್ತದೆ. ಅದು ನಮ್ಮನ್ನು ವಿನಯಿ ಹಾಗೂ ಧೀರರನ್ನಾಗಿಸುತ್ತದೆ" ಎಂದಿದ್ದಾರೆ. ಇವರಿಗೆ ಗಣಿತ ಶಾಸ್ತ್ರ ಶೈಕ್ಷಣಿಕ ವಿಷಯ ಮಾತ್ರವಾಗಿರಲಿಲ್ಲ, ಗಣಿತ ಶಾಸ್ತ್ರದಲ್ಲಿದ್ದ ಅವರ ಆಸಕ್ತಿ ಅವರ ಧಾರ್ಮಿಕ ಶ್ರದ್ಧೆಯ ಪ್ರತಿರೂಪವೇ ಆಗಿದ್ದಿತು.

(23 ನೇ ಪುಟ ನೋಡಿ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯುವರೆಗೆ ಕೆಲಸಮಾಡುತ್ತದೆ; ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯುವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ಶ್ರೀವೇಂಕಟೇಶ್ವರ ಸುಪ್ರಭಾತ

## (ಬ್ರಹ್ಮೋತ್ಸವ ಚಿತ್ರಮಾಲಿಕೆಯೊಡನೆ)

ಕೌಸಲ್ಯೆ ಮುತ್ತಾದ ಕಂದ! ಶ್ರೀರಾಮ!
ಮೂಡಣ ದಿಶೆಯಲ್ಲಿ ಮೂಡುತಿದೆ ಬೆಳಕು
ಎದ್ದೇಳು ನರವರ್ಯ! ಎದ್ದು ನೀ ಮಾಡು
ದೈನಂದಿನೋಚಿತ ದೈವೀಕ ಕಾರ್ಯ 1

ಎದ್ದೇಳು ಗೋವಿಂದ! ಏಳು ಲಕ್ಷ್ಮೀಶ!
ಗರುಡಕೇತನ! ಎದ್ದು ಕಾಯೋ ಮೂರುಲೋಕ 2

ಸರ್ವಲೋಕಾಂಬಿಕೆ! ಚಾರು ಸ್ವರೂಪೆ!
ದಾನವಾಂತಕನ ಹೃತ್ಸದ್ಮ ಸಂಚಾರೆ!
ಶ್ರೀದೇವಿ! ಶ್ರಿತಜನಾಭೀಷ್ಟದೆ! ಸುಪ್ರ
ಭಾತವು ನಿನಗೆ ಶೇಷಶೈಲೇಶಪತ್ನಿ! 3

ಸರಸಿಜ ನೇತ್ರೆ! ಪ್ರಸನ್ನೇಂದು ವದನೆ!
ಬ್ರಹ್ಮ ರುದ್ರೇಂದ್ರರ ಪತ್ನಿಯರಿಂದ
ಸೇವೆ ಸಲ್ಲುವ ದಯಾಸಿಂಧುವೆ! ಸುಪ್ರ
ಭಾತವು ನಿನಗೆ ಶೇಷ ಶೈಲೇಶಪತ್ನಿ! 4

ಅತ್ರಿ ಮುಂತಾದ ಸಂಯಮಿಗಳೇಳಾಳು
ಸಂಧ್ಯಾಸೇವೆ ಗೈದು ಗಂಗಾಬ್ಜ ತತಿಯ
ಹಿಡಿದು ನಿನ್ನಡಿ ಪೂಜೆಗಿಚ್ಛಿಸುತ್ತಿಹರು
ಸುಪ್ರಭಾತವು ಶೇಷಶೈಲೇಶ ನಿನಗೆ 5

ಈಶ ಷಡಾಸ್ಯ ಬ್ರಹ್ಮೇಂದ್ರಾದಿ ಸುರರು
ತ್ರೈವಿಕ್ರಮಾದಿಕ ಸ್ತವವ ಮಾಡಿದರು
ವಾಗೀಶ ಪಠಿಸಿದ ಪಂಚಾಂಗಶುದ್ಧಿ
ಸುಪ್ರಭಾತವು ಶೇಷಶೈಲೇಶ ನಿನಗೆ 6

ತೆಳುಬಿಚ್ಚುತಿಹ ಪದ್ಮ ತೆಂಗು ಕೌಂಗುಗಳು
ಮುಂತಾದವಿಹ ಹೃದ್ಯ ಭೂಮಿಗಳಿಂದ
ಮಾರುತ ಬೀಸಿದ ಮಧುಗಂಧ ಮೆಲ್ಲ
ಸುಪ್ರಭಾತವು ಶೇಷಶೈಲೇಶ ನನಗೆ 7



ರಥೋತ್ಸವ

ಕಣ್ಬಿಚ್ಚಿ ಕ್ರೀಡಾಶುಕಂಗಳಿಂಪಾಗಿ
ಒಳ್ಪು ಪಂಜರ ಪಾತ್ರೆಯೊಳು ಮಿಕ್ಕ ಬಾಳೆ
ಹಣ್ಣು ಪಾಯಸಗಳುಂಡಾಡಿ ಹಾಡಿದವು
ಸುಪ್ರಭಾತವು ಶೇಷಶೈಲೇಶ ನಿನಗೆ 8

ಕ್ರಮ ಚಾಲನಮಗ್ನ ಕರದಿ ನಾರದನು
ಶ್ರುತಿಮಾಡಿ ವೀಣೆಯನು ಸುಶ್ರಾವ್ಯವಾಗಿ
ಪ್ರೌಢಿಯಲಿ ಹಾಡಿದನು ಭವದೀಯ ಮಹಿಮೆ
ಸುಪ್ರಭಾತವು ಶೇಷಶೈಲೇಶ ನಿನಗೆ 9

ಮಕರಂದ ರಸಪಾನ ಮಾಡಿ ದುಂಬಿಗಳು
ಝುಂಕಾರ ನಿನದದಿ ಕಂಜಗಳ ಸನಿಹ
ನಿರ್ಗಮಿಸುತಿಹವು ನಿನ್ನ ಸೇವಿಸಲು
ಸುಪ್ರಭಾತವು ಶೇಷಶೈಲೇಶ ನಿನಗೆ 10

---

ಕನ್ನಡಾವತರಣ: ಜಿ. ಚೆನ್ನಯ್ಯ

---



ದೊಡ್ಡ ಶೇಷವಾಹನ

ಸಿಂಹವಾಹನ



ಗೋಪಿಕಾಂಗನೆಯರು ಗೋಶಾಲೆಗಳಲಿ
ಕಡೆಯುವಾ ಮೊಸರಿಂದ ಕವಿದ ನಿರ್ಘೋಷೆ
ಘಟಗಳುಂ ದಿಶೆಗಳುಂ ಕಾದಿದಂತಿಹುದು
ಸುಪ್ರಭಾತವು ಶೇಷಶೈಲೇಶ ನಿನಗೆ 11

ಭ್ರಮರಂಗಳರಳಿದ ಪಂಕಜ ಹೊಕ್ಕು
ನೆಯ್ದಿಲೆ ಜಯಿಸಲು ನಿಜಕಾಂತಿಯಿಂದ
ಭೇರಿ ನಿಸ್ವನದಂತೆ ಬಿರು ಘೋರ್ಗರೆದವು
ಸುಪ್ರಭಾತವು ಶೇಷಶೈಲೇಶ ನಿನಗೆ 12

ಕೋರಿದ ವರಗಳ ಕೊಡುವ ಶ್ರೀಮಂತ!
ವಸುಧೈಕ ಬಾಂಧವ! ವಾತ್ಸಲ್ಯಸಿಂಧು!
ಶ್ರೀದೇವಿ ಗೃಹವಕ್ಷ! ಚಿನ್ಮಯಾಕಾರ!
ಸುಪ್ರಭಾತವು ಶೇಷಶೈಲೇಶ ನಿನಗೆ 18

ಹರ ವಿರಿಂಚಿ ಸನಂದನಾದ್ಯರು ಸ್ವಾಮಿ
ಕಲ್ಯಾಣಿಯಲಿ ಮಿಂದು ಕಲ್ಯಾಣಕೋರಿ
ಭಟರ ಕಡ್ಡಾಯದಿ ಬಾಗಿಲಲ್ಲಿಹರು
ಸುಪ್ರಭಾತವು ಶೇಷಶೈಲೇಶ ನಿನಗೆ 14

ಶೇಷಾದ್ರಿ ಗರುಡಾದ್ರಿ ಶ್ರೀವೆಂಕಟಾದ್ರಿ
ವೃಷಭಾದ್ರಿ ವೃಷ ಶೈಲ ಇತ್ಯಾದಿಯಾಗಿ
ಖ್ಯಾತಿ ಹೊಂದಿತು ನಿನ್ನ ಆವಾಸವನಿಶ
ಸುಪ್ರಭಾತವು ಶೇಷಶೈಲೇಶ ನಿನಗೆ 15

ಕಲ್ಪವೃಕ್ಷವಾಹನ



ಹರ ಸುರೇಶ್ವರ ವಹ್ನಿ ಯಮ ವಾಯು
ವರುಣ ಕುಬೇರರು ಫಾಲಂಗಳಲ್ಲಿ
ಭಕ್ತಿಯಿಂದಂಜಲಿ ಬದ್ಧರಾಗಿಹರು
ಸುಪ್ರಭಾತವು ಶೇಷಶೈಲೇಶ ನಿನಗೆ 16

ಖಗರಾಜ ಮಿಗರಾಜ ಗಜರಾಜ ಮತ್ತು
ಹಯರಾಜ ಫಣಿರಾಜ ಅಧಿಕಾಧಿಕಾರ
ನಿನ್ನ ಧಾಳಿಗಳಲ್ಲಿ ನೀಡೆನ್ನುತಿಹರು
ಸುಪ್ರಭಾತವು ಶೇಷಶೈಲೇಶ ನಿನಗೆ 17

ರವಿ ಚಂದ್ರ ಕುಜ ಬುಧ ರಾಹು ಕೇತುಗಳು
ಶನಿ ಶುಕ್ರ ಗುರುಗಳು ಸ್ವರ್ಗಮಂಡಳಿಯ
ಪ್ರಮುಖರೆಲ್ಲರು ನಿನ್ನ ಪರಮ ಸೇವಕರು
ಸುಪ್ರಭಾತವು ಶೇಷಶೈಲೇಶ ನಿನಗೆ 18

ಶಿರದಲ್ಲಿ ನಿನ್ನಯ ಶ್ರೀಪಾದಧೂಳಿ
ಮುಡಿದಿಹ ಭಕ್ತರು ಮುಕ್ತಿಗಾಸಿಸದೆ
ಅಘಕಲ್ಪ ಬರುವುದೆಂದರಿತು ಕುಂದುವರು
ಸುಪ್ರಭಾತವು ಶೇಷಶೈಲೇಶ ನಿನಗೆ 19

ಶ್ರೀಗೋಪುರಂಗಳ ಶಿಖರಗಳ ಕಂಡು
ಭವ್ಯ ನಿರ್ವಾಣ ಸೌಭಾಗ್ಯಭಾಜನರು
ಮಾನವರಿಳೆಯಲ್ಲಿ ಮತಿ ನಿಲ್ಲಿಸುವರು
ಸುಪ್ರಭಾತವು ಶೇಷಶೈಲೇಶ ನಿನಗೆ 20



ಸರ್ವಭೂಪಾಲವಾಹನ

ಮೋಹಿನೀಅವತಾರ



ಹನುಮಂತವಾಹನ





ಚಂದ್ರಪ್ರಭವಾಹನ

ಅಶ್ವವಾಹನ



ಶ್ರೀವಸುಧಾಪತಿ ! ಶ್ರೀಕೃಪಾಜಲಧಿ !
ಜಗದೇಕ ರಕ್ಷಕ ! ಸರ್ವದೇವೇಶ !
ಶೇಷ ಖಗೇಂದ್ರಾದಿ ಸೇವಿತ ಚರಣ !
ಸುಪ್ರಭಾತವು ಶೇಷಶೈಲೇಶ ನಿನಗೆ 21

ಶ್ರೀವತ್ಸಲಾಂಛನ ! ಶ್ರೀಪದ್ಮನಾಭ !
ವೈಕುಂಠ ! ಮಾಧವ ವಸುದೇವ ತನಯ !
ಶರಣಾಗತಾಭೀಷ್ಟ ಸಂಧಾತ! ಚಕ್ರಿ !
ಸುಪ್ರಭಾತವು ಶೇಷಶೈಲೇಶ ನಿನಗೆ 22

ಮದನನ ಮದಭಂಗ ಮಾಡುವಾ ಚೆಲುವ !
ದಯಿತಾ ಕುಚಾಂಬುಜ ತತ್ಪರನೇತ್ರ !
ಮಂಗಳ ಗುಣನಿಧಿ ! ಮಹನೀಯ ಕೀರ್ತಿ !
ಸುಪ್ರಭಾತವು ಶೇಷಶೈಲೇಶ ನಿನಗೆ 23

ಮತ್ಸ್ಯ ಕೂರ್ಮ ವರಾಹ ಮನುಜ ಹರ್ಯಕ್ಷ
ವಾಮನ ಭಾರ್ಗವ ಪ್ರಭುರಾಮಚಂದ್ರ
ಕಾಮಪಾಲ ಮುಕುಂದ ಕಲ್ಕಿಸ್ವರೂಪ!
ಸುಪ್ರಭಾತವು ಶೇಷಶೈಲೇಶ ನಿನಗೆ 24

ಹೇಮ ಕುಂಭಗಳಲ್ಲಿ ಏಲಾಲವಂಗ
ಕರ್ಪೂರ ಸೌರಭ್ಯ ಕಲಿತಾಭ್ರಗಂಗೆ
ದಿವ್ಯಾಂಬು ಮಾನ್ಯ ವೈದಿಕರು ತಂದಿಹರು
ಸುಪ್ರಭಾತವು ಶೇಷಶೈಲೇಶ ನಿನಗೆ 25

ಭಾನು ಮೂಡುತಿಹ ತಾವರೆ ಬಿಚ್ಚುತಿಹವು
ಹಕ್ಕಿಗಳ ರವ ದಿಗ್ಭಾಗ ಹರಡಿತು
ಶ್ರೀವೈಷ್ಣವರು ನಿನ್ನ ಶ್ರೇಯ ಕೋರಿಹರು
ಸುಪ್ರಭಾತವು ಶೇಷಶೈಲೇಶ ನಿನಗೆ 26

ಬ್ರಹ್ಮಾದಿ ದಿವಿಜವರ್ಯರು ಸನಂದಾದಿ
ಋಷಿಯೋಗಿ ಸಾಧುವರೇಣ್ಯರಂಗಳದಿ
ಧರಿಸಿಹರರ್ಚನಾದ್ರವ್ಯಕೈಯಲ್ಲಿ
ಸುಪ್ರಭಾತವು ಶೇಷಶೈಲೇಶ ನಿನಗೆ 27

ವರಲಕ್ಷ್ಮಿ ಮಂದಿರ ! ವರಗುಣಸಾಂದ್ರ !
ನಿಗಮಾಂತಗೋಚರ ! ನಿಜಭಕ್ತಪೋಷ !
ಇಹಲೋಕ ಜಲಧಿ ದಾಟಿಸುವಂಥ ಸೇತು !
ಸುಪ್ರಭಾತವು ಶೇಷಶೈಲೇಶ ನಿನಗೆ 28

ಶ್ರೀವೆಂಕಟೇಶನ ಈ ಸುಪ್ರಭಾತ
ಪ್ರತ್ಯೂಷದಲಿ ನಿತ್ಯ ಪಠಿಸುವ ನೆನೆವ
ಜನರಿಗೆ ಕೈವಲ್ಯಸಂಪತ್ತಿ ಕೊಡುವ
ಪ್ರಜ್ಞಾತಿಶಯವು ಸಂಪ್ರಾಪ್ತವಾಗುವುದು 29

*

17 ನೇ ಪುಟದಿಂದ)

ತೀರ್ಥರಾಮರು ಪ್ರಾಧ್ಯಾಪಕರಾಗಿ ಕೀರ್ತಿಶಾಲಿಗಳಾದರೂ, ಅವರ ಮನಸ್ಸು ಕ್ರಮೇಣ ವೈರಾಗ್ಯದತ್ತ ಸೆಳೆಯುತ್ತಿತ್ತು. ಅದೇ ವೇಳೆಗೆ ಸ್ವಾಮಿ ವಿವೇಕಾನಂದರು ಲಾಹೋರಿಗೆ ಬಂದರು. ಅವರ ಧೀಮಂತ ವ್ಯಕ್ತಿತ್ವ, ತೀಕ್ಷ್ಣವಾದ ಬುದ್ಧಿಶಕ್ತಿ, ಅಸದೃಶ ಪಾಂಡಿತ್ಯ– ಇವುಗಳು ತೀರ್ಥರಾಮರ ಮೇಲೆ ತೀವ್ರವಾದ ಪ್ರಭಾವ ಬೀರಿದವು. ಅವರ ವೇದಾಂತಪರವಾದ ಉಪನ್ಯಾಸದಿಂದ ಇವರಲ್ಲಿ ಹುದುಗಿದ್ದ ವೈರಾಗ್ಯ ಪ್ರವೃತ್ತಿಗೆ ಪ್ರಚೋದನೆಯಾಗಿ, ತೀರ್ಥರಾಮರು ಸನ್ಯಾಸ ಸ್ವೀಕರಿಸಲು ಮನದಲ್ಲೇ ನಿರ್ಧಾರ ತಳೆದರು. ಸ್ವಾಮಿ ವಿವೇಕಾನಂದರಂತೆ ತಾವೂ ಪಾಶ್ಚಾತ್ಯ ದೇಶಗಳಲ್ಲಿ ಸಂಚರಿಸಿ ಭಾರತೀಯ ಧರ್ಮ ಸಂಸ್ಕೃತಿಗಳ ವೈಶಿಷ್ಟ್ಯಗಳನ್ನು ಸಾರಬೇಕೆಂಬ ಇಚ್ಛೆ ಉಂಟಾಯಿತು. ಪರಿಣಾಮವಾಗಿ ತಮ್ಮ ಪ್ರಾಧ್ಯಾಪಕ ಹುದ್ದೆಗೆ ರಾಜೀನಾಮೆ ನೀಡಿ ತಾವೊಬ್ಬರೇ ಹೃಷಿಕೇಶದ ಸಮೀಪದಲ್ಲಿರುವ ಬ್ರಹ್ಮಪುರಿಯ ಅರಣ್ಯಕ್ಕೆ ಹೊರಟರು. ಅವರೊಡನಿದ್ದ ವಸ್ತುಗಳೆಂದರೆ ಒಂದೆರಡು ಉಪನಿಷತ್ ಗ್ರಂಥಗಳು ಮಾತ್ರ. ಅವರು ಹಿಮಾಲಯ ಪರ್ವತ ಪಂಕ್ತಿಗಳ ತಪ್ಪಲಿನಲ್ಲಿ ಏಕಾಂಗಿಯಾಗಿ ಅಲೆಯುತ್ತ ಪ್ರಕೃತಿ ಸೌಂದರ್ಯೋಪಾಸಕರಾಗಿ ಉಪನಿಷತ್ ಗ್ರಂಥಗಳ ಅಧ್ಯಯನ ನಡೆಸಿದರು.

ಒಮ್ಮೆ ಕರಾಚಿಯಲ್ಲಿ ಸಮುದ್ರ ದಂಡೆಯ ಮೇಲೆ ಕುಳಿತಿದ್ದಾಗ ಸಮುದ್ರದ ಅಲೆಗಳಲ್ಲಿ ಮರದ ತುಂಡುಗಳು ತೇಲಿ ಹೋಗುತ್ತಿದ್ದುದನ್ನು ಕಂಡು ತಮ್ಮ ಸ್ನೇಹಿತರೊಂದಿಗೆ ಹೀಗೆ ನುಡಿದರು. "ಸಮುದ್ರದಲ್ಲಿ ಮರದ ತುಂಡುಗಳು ಒಮ್ಮೆ ಒಂದುಗೂಡಿಯೇ ಇರುತ್ತವೆ. ಆದರೆ ಮತ್ತೊಂದು ಕ್ಷಣದಲ್ಲಿ ಅಲೆಗಳ ಹೊಡೆತದಿಂದ ಬೇರೆಯಾಗುತ್ತವೆ. ಹಾಗೆಯೇ ಈ ಪ್ರಪಂಚವೆಂಬ ಮಹಾ ಸಾಗರದಲ್ಲಿ ಜೀವಿಗಳೆಂಬ ಮರದ ತುಂಡುಗಳು ಕೆಲವು ಕಾಲ ಕೂಡಿ ಬಾಳುತ್ತವೆ. ಪತಿ, ಪತ್ನಿ, ಪುತ್ರ, ಪುತ್ರಿ ಮೊದಲಾದ ಬಂಧು ಬಾಂಧವರೆಲ್ಲರೂ ಧರ್ಮ ಕರ್ಮ ಸಂಯೋಗದಿಂದ ಒಂದಾಗೂಡಿ ಬಾಳುತ್ತಿದ್ದು ವಿಧಿನಿಯಮದಂತೆ ಒಬ್ಬರನ್ನೊಬ್ಬರು ಅಗಲುತ್ತಾರೆ. ಇದು ಪ್ರಕೃತಿ ನಿಯಮ" ಎಂದು ಬದುಕಿನ ಕ್ಷಣಿಕತ್ವವನ್ನು ಜೀವನದ ರಹಸ್ಯವನ್ನು ತಿಳಿಸಿದರು.

ಹೀಗೆ ತೀರ್ಥರಾಮರು ಪರ್ವತ ಪ್ರದೇಶ. ನದಿ ದಂಡೆ, ಅರಣ್ಯ ಪ್ರದೇಶಗಳಲ್ಲಿ ಏಕಾಂಗಿಯಾಗಿ ಸುತ್ತಾಡಿ ಸನ್ಯಾಸಿಗೆ ಬೇಕಾದ ಕಠೋರವಾದ ಸಂಯಮ ಧ್ಯಾನಾಸಕ್ತಿ ಇವುಗಳನ್ನು ಹೊಂದಿ ಒಂದು ದಿನ ಪೂರ್ವ ನಿರ್ಧಾರದಂತೆ ಸಂಸಾರವನ್ನು ತೊರೆದು ಗಂಗಾನದಿಯ ದಡಕ್ಕೆ ಬಂದು ಆ ಪವಿತ್ರ ತೀರ್ಥದಲ್ಲಿ ಮಿಂದು ಕಾವಿ ಬಟ್ಟೆಯನ್ನು ಧರಿಸಿ ಭವದ ಬಂಧನಗಳನ್ನು ಕಳಚಿಕೊಂಡು ಆನಂದದಿಂದ ಧ್ಯಾನಮಗ್ನರಾದರು. ತೀರ್ಥರಾಮರು ಸ್ವಾಮಿ ರಾಮತೀರ್ಥರಾದರು.

ಸ್ವಾಮಿ ರಾಮತೀರ್ಥರು ಅತಿ ಶ್ರೇಷ್ಠ ಅನುಭಾವಿಯಾಗಿ ತಾವು ಪಡೆದ ದಿವ್ಯ ಜ್ಞಾನವನ್ನು ಲೋಕ ಕಲ್ಯಾಣಕ್ಕಾಗಿ ಬಳಸಬೇಕೆಂಬ ಉದ್ದೇಶ

ದಿಂದ ಭಾರತವನ್ನೆಲ್ಲಾ ಸಂಚರಿಸಿ ಭಾರತೀಯರ ಅಜ್ಞಾನವನ್ನು ಹೋಗಲಾಡಿಸಿ ಅವರ ಆಲಸಿಕೆಯನ್ನು ಕಳೆದು ಸ್ವಾರ್ಥತೆಯನ್ನು ಖಂಡಿಸುತ್ತ ಕಾರ್ಯತತ್ಪರತೆ, ದಕ್ಷತೆ, ಧೃತಿ, ಕ್ಷಮೆ, ಸಮತಾ ದೃಷ್ಟಿ, ಶಾಂತಸ್ವಭಾವ ಇವುಗಳನ್ನು ಬೆಳೆಸಿಕೊಳ್ಳುವಂತೆ ಕರೆ ನೀಡಿದರು. "ಯಾವ ವಿಷಯವನ್ನಾದರೂ ಸರಿಯೆ, ಗುಣವಿದ್ದರೆ ಸ್ವೀಕರಿಸುವುದು ಉತ್ತಮ. ವಿಮರ್ಶಾತ್ಮಕ ಸ್ವಾತಂತ್ರ್ಯ ಪ್ರತಿಯೊಬ್ಬರಿಗೂ ಇರಬೇಕು." "ಕರ್ಮವು ಜ್ಞಾನ ಸಂಪಾದನೆಗೆ ಸಾಧನ, ಕರ್ಮವನ್ನು ಅದರ ಸಲುವಾಗಿಯೇ ಮಾಡಬೇಕು" "ಎಲ್ಲ ಪ್ರಾಣಿಗಳನ್ನು ಪ್ರೀತಿಸು. ಪ್ರೀತಿಯಿಂದಲೆ ಆನಂದವು ಹುಟ್ಟುವುದು. ದೇವರು ಆನಂದ ಸ್ವರೂಪನು" ಇಂತಹ ಉಪದೇಶಾಮೃತವನ್ನು ಜನತೆಗೆ ನೀಡಿದರು. ಸಾಮಾನ್ಯ ವ್ಯಕ್ತಿಯ ಹೃದಯದಲ್ಲಿಯೂ ಭಗವತ್ ಭಕ್ತಿ ನೆಲಸುವಂತೆ ಮಾಡಿ ಆತ್ಮ ಸಾಕ್ಷಾತ್ಕಾರದ ಅಭೀಪ್ಸೆಯನ್ನು ಬೆಳಗಿಸಿದರು. ಅವರ ಒಂದೊಂದು ಮಾತೂ ಸ್ವಾನುಭವದ ಸಿಡಿಲು ನುಡಿಯಾಗಿದ್ದಿತೇ ವಿನಹ ಜನರನ್ನು ಆಕರ್ಷಿಸುವ ಆಡಂಬರದ ಮಾತಾಗಿರಲಿಲ್ಲ. ಅವರ ಅನುಯಾಯಿಯೊಬ್ಬರ ಮಾತಿನಲ್ಲೇ ಹೇಳುವುದಾದರೆ "ಅವರ ಒಂದೊಂದು ಮಾತು ದೈವತ್ವದಿಂದ ಕೂಡಿದ್ದು ಭಗವತ್ ಸಾಕ್ಷಾತ್ಕಾರದಿಂದ ಮೂಡಿದ ತೇಜೋಯುಕ್ತವಾದ ಕಿಡಿಗಳಾಗಿದ್ದವು".

ಸ್ವಾಮಿ ರಾಮತೀರ್ಥರು ಆಪ್ತ ಮಿತ್ರರ ಒತ್ತಾಯದ ಮೇರೆಗೆ, ಮಿಗಿಲಾಗಿ ಅಂತರ್ಯದಲ್ಲಿ ಘನೋದ್ದೇಶವನ್ನು ಹೊಂದಿದ್ದು ಅಮೇರಿಕಾ ಮತ್ತು ಜಪಾನ್ ದೇಶಗಳಿಗೆ ಭೇಟಿ ನೀಡಿದರು. ಸ್ವಾಮಿ ವಿವೇಕಾನಂದರಂತೆ ತಾವೂ ಸಹ ಭಾರತೀಯ ಧರ್ಮ, ಸಂಸ್ಕೃತಿ, ವೇದಾಂತಗಳನ್ನು ಅಲ್ಲಿನ ಜನರಿಗೆ ವಿವರಿಸಿ ಅವರಲ್ಲಿ ಇವುಗಳ ಪರವಾದ ಆಸಕ್ತಿ ಹುಟ್ಟಿಸಿದರು. ಭಾರತದ ಸರಿಯಾದ ಚಿತ್ರವನ್ನು ಪಾಶ್ಚಾತ್ಯರಿಗೆ ನೀಡಿ ರಾಜಕೀಯ, ಸಾಮಾಜಿಕ ವೈಜ್ಞಾನಿಕ ಕ್ಷೇತ್ರಗಳಲ್ಲಿ ಅವರ ನೆರವನ್ನು ಕೋರಿದರು. ಭಾರತದ ಘನತೆ ಗೌರವಗಳಿಗೆ ಸ್ವಲ್ಪವೂ ಚ್ಯುತಿ ಬಾರದ ಹಾಗೆ ಅವರಲ್ಲಿ ಮಾನವೀಯತೆಯ ದೃಷ್ಟಿಯನ್ನು ತಂದರು. ಸ್ವಾಮಿ ರಾಮತೀರ್ಥರು ಟೋಕಿಯೋ ನಗರದ ಬೌದ್ಧ ವಿಶ್ವವಿದ್ಯಾನಿಲಯದಲ್ಲಿ ಜನರು ಕಿಕ್ಕಿರಿದು ಸೇರಿದ್ದ ಸಭೆಯೊಂದರಲ್ಲಿ 'ವಿಶ್ವಪ್ರೇಮ' ಎಂಬ ವಿಚಾರವಾಗಿ ಉಪನ್ಯಾಸ ಮಾಡಿದರು. "ಸಕಲ ಚರಾ ಚರ ವಸ್ತುಗಳಲ್ಲಿಯೂ ಪರಮಾತ್ಮನೇ ವ್ಯಾಪಿಸಿದ್ದಾನೆ ಎಂದು ತಿಳಿಯಿರಿ. ಅನಂತರ ನಿಮ್ಮ ಸಂಸಾರ ಬಂಧು ಬಳಗ ಸ್ನೇಹಿತರ ಹಿತವೇ ನಿಮ್ಮ ಹಿತವೆಂದು ತಿಳಿಯಿರಿ. ಅನಂತರ ನಿಮ್ಮ ಪ್ರೇಮವನ್ನು ಊರು, ದೇಶ, ಎಲ್ಲಕಡೆಗೂ ಹಬ್ಬಿಸಿ ಇಡೀ ವಿಶ್ವವನ್ನು ಪ್ರೀತಿಸಿ" ಎಂದು ಸಾರಿದರು. ಜನ ಸಮೂಹ ಅವರ ದಿವ್ಯವಾಣಿಯನ್ನು ಆಲಿಸಿ ಮುಕ್ತ ಕಂಠದಿಂದ ಹೊಗಳಿತು.

ಸ್ವಾಮಿ ರಾಮತೀರ್ಥರು ಉಜ್ವಲ ದೇಶಭಕ್ತರಾಗಿದ್ದರು. ಅವರ ಪ್ರತಿಯೊಂದು ಮಾತಿನಲ್ಲಿಯೂ ರಾಷ್ಟ್ರಭಕ್ತಿ ಪ್ರಕಾಶಿಸುತ್ತಿತ್ತು. "ಶಿವಭಕ್ತನು ಶಿವನನ್ನು ಪೂಜಿಸುವಂತೆ, ವಿಷ್ಣು ಭಕ್ತನು ವಿಷ್ಣುವನ್ನು ಪೂಜಿಸುವಂತೆ, ನಾವು ನಮ್ಮ ಮಾತೃಭೂಮಿಯನ್ನು ಪೂಜಿಸಬೇಕು" ಎಂದಿದ್ದಾರೆ. ಭಾರತೀಯರಲ್ಲಿ ದೇಶ ಭಕ್ತಿಯನ್ನು ಜಾಗೃತಗೊಳಿಸುತ್ತ, "ಓ ಭಾರತೀಯರೆ, ನೀವು ಎಲ್ಲಿಯವರೆಗೆ ನಮ್ಮ ದೇಶ ಮತ್ತು ದೇಶ ಬಾಂಧವರೊಡನೆ ನಿಕಟವಾದ ಐಕ್ಯಭಾವವನ್ನು ಪಡೆಯುವುದಿಲ್ಲವೋ ಅಲ್ಲಿಯ ವರೆಗೆ ನಿಮ್ಮ ನೆಚ್ಚಿನ ಗುರಿಯನ್ನು ಖಂಡಿತವಾಗಿಯೂ ಮುಟ್ಟಲಾರಿರಿ. ಇದು ನಿಶ್ಚಿತ. ನಿಮ್ಮ ನರನಾಡಿಗಳಲ್ಲಿ ಎಲ್ಲಿಯತನಕ ಉಚ್ಚವಾದ ದೇಶ ಪ್ರೇಮ ಎಂಬ ರಕ್ತ ಹರಿಯುವುದಿಲ್ಲವೊ ಅಲ್ಲಿಯ ತನಕ ನಿಮ್ಮ ಪರಮೋದ್ದೇಶ ಈಡೇರುವುದಿಲ್ಲ" ಎಂದು ನುಡಿದಿದ್ದಾರೆ.

ಸ್ವಾಮಿ ರಾಮತೀರ್ಥರು ಅಮೇರಿಕಾದಿಂದ ಹಿಂತಿರುಗಿದ ಮೇಲೆ ತಮ್ಮ ದಿನದ ಬಹುಭಾಗವನ್ನು ಆಧ್ಯಾತ್ಮಿಕ ಸಾಧನೆಗಳಿಗೆ ವಿನಿಯೋಗಿಸಿ ಹೊರಗಿನ ಸಂಪರ್ಕದಿಂದ ಆದಷ್ಟು ದೂರವಿದ್ದು ಸದಾ ಸಮಾಧಿ ಸ್ಥಿತಿಯಲ್ಲಿರುತ್ತಿದ್ದರು. ಕ್ರಿ.ಶ. 1906 ನೆಯ ಇಸವಿ ಅಕ್ಟೋಬರ್ 17 ದೀಪಾವಳಿ ದಿನದಂದು ಸ್ವಾಮಿ ರಾಮತೀರ್ಥರು ತಮಗೆ ಬಹು ಪ್ರಿಯವಾಗಿದ್ದ ಗಂಗಾ ನದಿಯಲ್ಲಿ ಸ್ನಾನ ಮಾಡುತ್ತ ತಮ್ಮ ಭೌತಿಕ ಶರೀರವನ್ನು ತೊರೆದರು.

ಸ್ವಾಮಿ ರಾಮತೀರ್ಥರು ಭಾರತದ ಮಹಾಪುರುಷರ ಸಾಲಿನಲ್ಲಿ ದಿವ್ಯ ನಕ್ಷತ್ರವಾಗಿ ಬೆಳಗುತ್ತಿದ್ದು ಭಾರತೀಯರನ್ನು ಅಸತ್ಯದಿಂದ ಸತ್ಯದೆಡೆಗೆ, ಕತ್ತಲಿನಿಂದ ಬೆಳಕಿನೆಡೆಗೆ, ಮೃತ್ಯುವಿನಿಂದ ಅಮೃತತ್ವಕ್ಕೆ ಕರೆದೊಯ್ಯುವ ದಿವ್ಯಚೈತನ್ಯವಾಗಿ ಅಮರರಾಗಿದ್ದಾರೆ.

---

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

### ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣ ಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | | | |
|---|---|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಯಿಂದ | 5–30 | ವರೆಗೆ |
| ಸಹಸ್ರನಾಮಾರ್ಚನೆ | ,, | 5–30 ಗಂಟೆಯಿಂದ | 6–00 | ವರೆಗೆ |
| ಮೊದಲನೆಯ ಗಂಟೆ | ,, | 6–00 ಗಂಟೆಯಿಂದ | 6–30 | ವರೆಗೆ |
| ಸರ್ವದರ್ಶನ | ,, | 6–30 ಗಂಟೆಯಿಂದ ಮಧ್ಯಾಹ್ನ | 1–00 | ವರೆಗೆ |
| ಎರಡನೇ ಗಂಟೆ | ಮಧ್ಯಾಹ್ನ | 1–00 ಗಂಟೆಯಿಂದ | 1–30 | ವರೆಗೆ |
| ಸರ್ವದರ್ಶನ | ,, | 1–30 ರಿಂದ ರಾತ್ರಿ | 7–30 | ವರೆಗೆ |
| ರಾತ್ರಿ ಗಂಟೆ | ರಾತ್ರಿ | 7–00 ರಿಂದ ರಾತ್ರಿ | 8–45 | ವರೆಗೆ |
| ಏಕಾಂತಸೇವೆ, ಶೀರ್ವಾನ | ರಾತ್ರಿ | 8–45 ರಿಂದ ರಾತ್ರಿ | 9–00 | ವರೆಗೆ |

ಗಮನಿಕೆ:– ಶುಕ್ರವಾರಗಳಲ್ಲಿ ಮೇಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಉಂಟು. ಸಹಸ್ರನಾಮಾರ್ಚನೆಯ ಟಿಕೆಟ್ ಬೆಲೆ 6–50 ರೂ. ಒಂದು ಟಿಕೆಟ್ಟಿಗೆ ನಾಲ್ವರು ಅನುಮತಿಸಲ್ಪಡುತ್ತಾರೆ.

ಸರ್ವದರ್ಶನದ ಸಮಯದಲ್ಲಿ 1–50 ರೂ. ಟಿಕೆಟ್ಟಿನಿಂದ ಭಕ್ತರು ಅಷ್ಟೋತ್ತರ ಅರ್ಚನೆ ನಡೆಸಿಕೊಳ್ಳಬಹುದು.

**ಪೇಷ್ಕಾರ್.**

(14 ನೇ ಪುಟದಿಂದ)

ವಿಜ್ಞಾನವೂ ಇದನ್ನು ಸಾರುತ್ತದೆ. ಹೆರಿಗೆ ಮನೆಯಲ್ಲೇ ಆದರೆ ಆ ಜಾಗಕ್ಕೆ ಗಾಳಿ ಬೆಳಕುಗಳು ಅತಿಯಾಗಿ ಬಾರದಂತೆ ನೋಡುವುದು ರೂಢಿ. ಹಾಗೇ ಗಂಡಸೇ ಆದರೂ ಹನ್ನೆರಡು ದಿನ ದೂರ ಇರಬೇಕೆಂದು ಹೇಳುವುದು ರೂಢಿ. ಹೊಸತಾಗಿ ಬಂದ ಕೂಸನ್ನು ಮುಟ್ಟಿ ಮುದ್ದಾಡಲು ಅದರ ಅಕ್ಕ ಅಣ್ಣಗಳು ಆಟವಾಡಿದ ಕೊಳೆಯಲ್ಲೇ ನುಗ್ಗಿದರೆ ಮಗುವಿಗೆ ಕೇಡಾದೀತೆಂಬ ಭಯ ನಮ್ಮ ಹಿರಿಯರದು. ಹಾಗಾಗಿ ಮೈಲಿಗೆಯ ಗಡಿರೇಖೆ ಹಾಕಿದರು. ಪುನರ್ಜನ್ಮವೆಂದು ಪರಿಗಣಿಸಲ್ಪಡುವ ಹೆರಿಗೆಯಿಂದ ದುರ್ಬಲಳಾದ ಹೆಣ್ಣಿಗೆ ವಿಶ್ರಾಂತಿ, ಆರೈಕೆ, ಅಗತ್ಯ. ಹಾಗಾಗಿ ಮೈಲಿಗೆಯ ರೇಖೆ ಹಾಕಿದರು. ಈ ನಡವಳಿಕೆಯು ಸದಾಚಾರ ಸಂಹಿತೆಯೇ ಹೊರತು ಕಂದಾಚಾರವಲ್ಲ. ಹಾಗೇ ಮುಟ್ಟಾದವಳೂ ಅಡಿಗೆ ಮನೆ, ಮಕ್ಕಳುಗಳಿಂದ ದೂರವಿರಲೆಂದೇ, ಆಕೆಗೆ ವಿಶ್ರಾಂತಿಯನ್ನು ಒದಗಿಸುವ ದೃಷ್ಟಿಯಿಂದಲೇ, ಮೈಲಿಗೆಯ ರೀತಿ ಜಾರಿಗೆ ಬಂತು. ಆಚಾರವೇ ಸ್ವರ್ಗ. ಅನಾಚಾರವೇ ನರಕ. ಆಚಾರವೇ ಧರ್ಮದ ಮೂಲ. ಎಲ್ಲ ನಡವಳಿಕೆಗಳಿಗೂ ಯಾವುದಾದರೊಂದು ರೀತಿಯಲ್ಲಿ ಧರ್ಮದ ಸಂಬಂಧವಿರುತ್ತದೆ. ಆ ಧರ್ಮ ಆರೋಗ್ಯ, ಸಮಾಜಹಿತ, ನೈತಿಕ ನೆಲೆಗಟ್ಟಿನಲ್ಲಿ ನಿಂತಿರುತ್ತದೆ–ಎಂದು ಮತ್ತೆ ನೆನಪಾಗಬೇಕು.

ಮಗು ಹುಟ್ಟಿದ ಮನೆಯ ಮುಂದೆ ಬೇವಿನ ಸೊಪ್ಪಿನ ಕಂತೆ ತಲೆ ಬಾಗಿಲಿಗೆ ಕಟ್ಟಿರುವುದು ಕಾಣಿಸುತ್ತದೆ. ಒಳಗೆ ಮಗುವಿನ ಮಲಗು ಮನೆಯಲ್ಲಿ ಲೋಭಾನದ ಹೊಗೆ ಹಾಕುತ್ತಾರೆ. ಮೆಣಸಿನಕಾಯಿ ತೊಟ್ಟು, ಬೆಳ್ಳುಳ್ಳಿ ಸಿಪ್ಪೆ, ಸಾಸಿವೆ, ನೆಕ್ಕಿಸೊಪ್ಪು, ಮುರಿದು ಕೆಂಡಕ್ಕೆ ಹಾಕಿ ಹೊಗೆ ಬರಿಸಿ ಮಗುವಿನ ತೊಟ್ಟಿಲಿನ ಅಡಿಗೆ ಹಿಡಿಯುತ್ತಾರೆ. ಇವು ಒಂದು ಕಾಲದ ಕೀಟನಾಶಕ–ಕ್ರಿಮಿನಾಶಕ–ರೋಗನಾಶಕ ವಿಧಾನ. ಮಗು–ತಾಯಿ ಮೀಯುವ ನೀರಿಗೆ ಬೇವಿನ ಸೊಪ್ಪು ಹಾಕುವ ಬದಲು ಈಗ 'ಡೆಟಾಲ್' ಹಾಕುತ್ತಾರೆ. ಸೊಳ್ಳೆ ಕಡಿಯದಿರಲೆಂದು ಸೊಳ್ಳೆ ಪರದೆ ಕಟ್ಟುತ್ತಾರೆ.

ಮಗುವನ್ನು ತೊಟ್ಟಿಲಲ್ಲಿ ಹಾಕುವ ದಿನ ಮೊದಲು 'ಗುಂಡಪ್ಪ'ನನ್ನು ತೊಟ್ಟಿಲಲ್ಲಿ ಮಲಗಿಸುತ್ತಾರೆ. ಗುಂಡಪ್ಪನೆಂದರೆ ಸುಮಾರು ಎರಡು ಕಿಲೋ ತೂಗುವ ಗುಂಡುಕಲ್ಲು. ಅದಕ್ಕೆ ಬಟ್ಟೆ ಸುತ್ತಿ, ಅಲಂಕರಿಸಿ, ಶಾಸ್ತ್ರ ಮಾಡಿ ತೊಟ್ಟಿಲಿಗೆ ಮೊದಲು ಇಡುತ್ತಾರೆ–ನಂತರ ಮಗುವನ್ನು ಮಲಗಿಸುತ್ತಾರೆ. ಈ ಕ್ರಿಯೆ ತೋರಿಕೆಗೆ ತೀರ ಮೂಢನಂಬಿಕೆಯಾಗಿ ಕಾಣಿಸುತ್ತದೆ. ಆದರೆ ಅದರ ಹಿನ್ನೆಲೆಯಲ್ಲಿರುವ ವ್ಯಾವಹಾರಿಕ ಜಾಣ್ಮೆ ತಿಳಿದರೆ ಬೆರಗಾಗುತ್ತೇವೆ. ತೊಟ್ಟಿಲು ಸರಿಯಾಗಿದೆಯೇ ಎಂಬುದನ್ನು ಪರೀಕ್ಷಿಸಲು ಹಾಗೂ ಚಿಕ್ಕ ಮಗುವಿನ ಭಾರ ಸಾಕಾಗದೆ ತೊಟ್ಟಿಲು ತೂಗಿದಾಗ ಕವುಚಿಕೊಳ್ಳದಿರಲೆಂದು ಈ ಗುಂಡಪ್ಪ ಸಹಾಯ ಮಾಡುತ್ತದೆ. ತೊಟ್ಟಿಲಿನ ಸಮತೂಕ ಸಾಧಿಸಲು ಗುಂಡಪ್ಪನನ್ನು ಮಗುವಿನ ಕಾಲ ಬುಡದಲ್ಲೇ ಇಡುತ್ತಾರೆ.

ಹುಟ್ಟಿನಿಂದ ಸಾವಿನ ತನಕ ಯಾರೇ ಆದರೂ ಹತ್ತಾರು ಸಂದರ್ಭಗಳಲ್ಲಿ ಒಂದಲ್ಲ ಒಂದು ವಿಧದ ನಮ್ಮ ಪರಂಪರೆಯಿಂದ ಬಂದ ನಡವಳಿಕೆಗಳಂತೆ ನಡೆಯುವ ಸಂದರ್ಭ ಬರುತ್ತದೆ. ಅಂಥವುಗಳನ್ನು ಅರಿತಿರಬೇಕಾಗುತ್ತದೆ.

ಹಿರಿಯರನ್ನು ಕಂಡಾಗ, ಕುಳಿತಿದ್ದರೆ ಎದ್ದು ನಿಂತು ತೀರ ಹತ್ತಿರದ ಹಿರಿಯ ಬಂಧುಗಳಾದರೆ ಪೂಜ್ಯ ಭಾವನೆಯಿದ್ದರೆ–ಕಾಲು ಮುಟ್ಟಿ ನಮಸ್ಕರಿಸುವುದು, ಇಲ್ಲವಾದರೆ ಕೈ ಮುಗಿಯುವುದು ಜಾರಿಯಲ್ಲಿದೆ.

ಬಗ್ಗಿ ಕಾಲು ಮುಟ್ಟಿ ನಮಸ್ಕರಿಸುವ ಕ್ರಿಯೆಯನ್ನು ವಿವೇಚಿಸುವವರೊಡನೆ ಪ್ರಶ್ನೆ ಬರುವುದು 'ಕಾಲೇ ಯಾಕೆ ? ಶರೀರದ ಉತ್ತಮಾಂಗ ತಲೆಯಲ್ಲವೆ ? ಅದನ್ನು ಮುಟ್ಟಿ ವಂದಿಸಬಹುದಲ್ಲ ?' –ಎಂದು ಹೌದು, ತಲೆ ಶರೀರದ ಉತ್ತಮಾಂಗ. ಕಾಲು ಕೊನೆಯದು. ಆದರೆ ರಕ್ತ ಪಂಚಲನೆಯ ದೃಷ್ಟಿಯಿಂದ ಶರೀರದ ತುದಿ ಕಾಲು. 'ಅಡಿಯಿಂದ ಮುಡಿತನಕ' ಬೆವರಿದರು, ಬೆದರಿದರು, ಸಿಂಗರಿಸಿಕೊಂಡರು, ನಡುಗಿದರು– ಎಂದೆಲ್ಲ ಸಾಹಿತ್ಯಕ ವರ್ಣನೆಗಳಿವೆ. ಅಲ್ಲಿ ಅಡಿಯಿಂದ ಮುಡಿತನಕ –ಎಂದೇ ಇರುವುದು. ಮರಕ್ಕೆ ಬೇರಿನಂತೆ ಶರೀರಕ್ಕೆ ಕಾಲು. ಮರಕ್ಕೆ ಬುಡಕ್ಕೇ ನೀರು ಹಾಕುವುದು–ತಲೆಗಲ್ಲ.

ಕಾಲಿನಲ್ಲಿ ಹೆಬ್ಬೆರಳು ಅತ್ಯಂತ ಪವಿತ್ರ ಅಂಗ. ಅದು ಶರೀರದ ಅಗ್ರಭಾಗ. ಕಣ್ಣು ಕೇಂದ್ರ ಬಿಂದು. ಶಾಸ್ತ್ರ, ವೇದಾಂತ, ಯೋಗ, ಆಯುರ್ವೇದಗಳ ಜೊತೆಗೆ ಆಧುನಿಕ ವಿಜ್ಞಾನವೂ ಕಾಲಿನ ಮಹತ್ವ ಸಾರುತ್ತದೆ, ಕಾಲಿಲ್ಲದಿದ್ದರೆ ಮನುಷ್ಯನೇ ಇಲ್ಲ.

ಕಾಲನ್ನು ಮುಟ್ಟುವುದು ಕೈಯಿಂದ ಎಂಬ ಸಂಗತಿ ಮರೆಯಬಾರದು. ಕೈ ಶರೀರದ ಇನ್ನೊಂದು ತುದಿ. ಒಂದು ಶರೀರದ ಒಂದು ತುದಿ ಇನ್ನೊಂದು ಶರೀರದ ಇನ್ನೊಂದು ತುದಿಯನ್ನು ಮುಟ್ಟಿದಾಗಲೇ ಅಲ್ಲಿ ಪ್ರೇಮ, ವಿಶ್ವಾಸದ ವಿದ್ಯುತ್ತಿನ ಸಂಚಾರ ಸಾಧ್ಯ. ಚುಂಬಕ ಶಕ್ತಿಯ ಲೋಹದ ತುಂಡುಗಳಲ್ಲಿ 'ಧನ' 'ಋಣ'ಗಳು ಪರಸ್ಪರವನ್ನು ನಿರಾಕರಿಸುತ್ತವೆ. ವಿರುದ್ಧವಾದುವನ್ನು ಆಕರ್ಷಿಸುತ್ತವೆ. ಈ ನಿಯಮ ವಿದ್ಯುತ್ತಿಗೂ ಸರಿ. ನೆಗೆಟಿವ್, ಪಾಸಿಟಿವ್ ಸೇರಿದಾಗ ವಿದ್ಯುತ್ತಿನ ಸಂಚಾರ ಸುಗಮ. ಈ ನಿಯಮ ಶರೀರಕ್ಕೂ ಸಲ್ಲುತ್ತದೆ. ಒಬ್ಬರು ನಮ್ಮ ಕಾಲು ಮುಟ್ಟಿದಾಗ, ನಾವು ಇನ್ನೊಬ್ಬರ ಕಾಲು ಮುಟ್ಟಿದಾಗ ನಮ್ಮ ಶರೀರದಲ್ಲಾಗುವ ಭಾವ ಪರಿವರ್ತನೆ ಅನುಭವ ವೇದ್ಯವೇ ಹೊರತು ವರ್ಣನೆಗೆ ಸಾಧ್ಯವಿಲ್ಲ.

ಕೆಲವು ಕಡೆ ಕೆಲವು ಜನಾಂಗದಲ್ಲಿ ತಲೆಬಾಗಿ ವಂದಿಸಿದಾಗ ಕಾಲಿನಿಂದ ನೆತ್ತಿ ಒತ್ತಿ ಆಶೀರ್ವದಿಸುವ ಕ್ರಮ ರೂಢಿಯಲ್ಲಿದೆ. ಇನ್ನು ಬಹಳ ಕಡೆ ಕಾಲಿಗೆ ಬಿದ್ದಾಗ ತಲೆಗೆ ಕೈ ಇಡುವ ರೂಢಿ ಇದೆ. ಇದರಲ್ಲಿ ಅಡಗಿರುವ ತತ್ತ್ವವಿಷ್ಟೆ. ಪರಸ್ಪರರಲ್ಲಿರುವ ಭಾವದ ವಿದ್ಯುತ್ತನ್ನು ಪರಸ್ಪರರ ಶರೀರಕ್ಕೆ ಪ್ರವಹಿಸುವ ಕ್ರಿಯೆಯೇ ಈ ವಂದನೆ – ಆಶೀರ್ವಾದ–ನಮಸ್ಕಾರ.

ಪೂಜ್ಯರಾದವರಿಗೆ, ದೇವರಿಗೆ ಮಾಡುವ– ಮನಸ್ಸು, ಮಾತು, ಕೃತಿಗಳಿಂದ ಮಾಡುವ– ಸಾಷ್ಟಾಂಗ ನಮಸ್ಕಾರದ ಅರ್ಥವೂ ಕೂಡಾ ಕಾಲು ಮುಟ್ಟಿ ನಮಸ್ಕರಿಸುವುದರ ಪರಿಪೂರ್ಣ ರೂಪ. ಎದೆ, ತಲೆ, ದೃಷ್ಟಿ, ಮನಸ್ಸು, ಮಾತು, ಕಾಲು, ಕೈ, ತೊಡೆ ಈ ಎಂಟು ಅಂಗಗಳು ಸಾಷ್ಟಾಂಗ ನಮಸ್ಕಾರದ ಎಂಟು ಅಂಗಗಳು. ಈ ಅಂಗಗಳಿಂದ ಒಟ್ಟಿಗೇ ಮಾಡುವ ನಮಸ್ಕಾರವೇ ಸಾಷ್ಟಾಂಗ ನಮಸ್ಕಾರ.

ಬಂಧುಗಳನ್ನು, ಗುರುಹಿರಿಯರನ್ನು ಕಂಡು ನಮಸ್ಕಾರ ಮಾಡುವಾಗ ಪ್ರವರ ಹೇಳುವ ಕ್ರಮ ಶಾಸ್ತ್ರದಲ್ಲಿದೆ. ಹೊಸಬರಿಗೆ ನಮಸ್ಕರಿಸುವಾಗಲೂ ಇದು ಅಗತ್ಯ. ಇದು ಆಧುನಿಕ ಕಾಲದ ಸ್ವಪರಿಚಯ ಹೇಳಿಕೊಂಡು ಕೈಕುಲುಕುವ ಕ್ರಮದ ಮೂಲರೂಪ. 'ನಾನು ಇಂಥವನ ಮಗ, ಇಂಥವನು, ಇಂಥ ಉದ್ಯೋಗ...' ಇತ್ಯಾದಿ ಸ್ವಪರಿಚಯ, ಪ್ರವರ ಹೇಳಿಕೊಂಡು ವಂದಿಸುವುದು ನಮ್ಮ ಸಂಸ್ಕೃತಿ.

'ಶರೀರದ ಪವಿತ್ರ ಅಂಗಗಳಾದ ಕಿವಿಗಳಲ್ಲಿರುವ ಚಿನ್ನಕ್ಕೆ ಕೈಸೋಕಿಸಿ, ಕೈ ಸ್ವಚ್ಛ ಮಾಡಿಕೊಂಡು ತನ್ನ ಗೋತ್ರ, ಪ್ರವರ, ಉಚ್ಚರಿಸಿ ಹೆಸರು ಹೇಳಿ ಅಭಿವಾದಿಸುವುದು ಭಾರತೀಯ ಕ್ರಮ.

ಇದು ಹಿರಿಯರಿಗೆ ವಂದಿಸುವ ಕ್ರಮವಾದರೆ ಕೈ ಮುಗಿದು ವಂದಿಸುವುದು ಸಮಾನರಿಗೆ, ಮಿತ್ರರಿಗೆ. ಹಿರಿಯರೂ ದಾರಿಯಲ್ಲಿ ಸಿಕ್ಕರೆ ಕೈ ಮುಗಿದೇ ವಂದಿಸಬೇಕು. ಎರಡೂ ಅಂಗೈಗಳನ್ನು ಪರಸ್ಪರ ಹೊಂದಿಸಿ ಬೆರಳನ್ನು ಪರಸ್ಪರ ಜೋಡಿಸಿ ಕೈಗಳನ್ನು ಎದೆ ಅಥವಾ ಮೂಗಿನ ನೇರಕ್ಕೆ ಎತ್ತಿ 'ನಮಸ್ಕಾರ' ಎಂದು ಉಚ್ಚರಿಸಬೇಕು. ಒಂದು ಕೈ ಎತ್ತಿ, ಕೈಯನ್ನು ಗಾಳಿಯಲ್ಲಿ ಬೀಸಿ, ನಾಲ್ಕು ಬೆರಳು ಕೆನ್ನೆಯ ಬಳಿ ಹಿಡಿದು, ಎರಡು, ಮೂರು, ಬೆರಳು ಕೆನ್ನೆಯ ಬದಿಗೆ ಹಿಡಿದು ವಂದಿಸುವುದು–

ಹಲವು ವಿಧದ ಸಂಘ, ಸಂಸ್ಥೆಯ ಶಿಸ್ತಿನ ವಂದನೆಗಳಲ್ಲಿವೆ. ನಾಗರಿಕ ಜೀವನದಲ್ಲಿಯೂ ಇದು ಜಾರಿಯಲ್ಲಿದೆ. ಬಲ, ಎಡಗೈಗಳ ಹತ್ತು ಬೆರಳುಗಳನ್ನು ಜೋಡಿಸಿ ವಂದಿಸುವ ಕ್ರಮಕ್ಕೆ ಏನಾದರೂ ಅರ್ಥವಿದೆಯೆ ? ಇದೆ. ನಮ್ಮ ಶರೀರ ಪಂಚತತ್ತ್ವಗಳಿಂದ – ಮಣ್ಣು, ನೀರು, ಬೆಂಕಿ, ಗಾಳಿ, ಆಕಾಶಗಳಿಂದ ರಚಿತವಾದುದು. ಪ್ರಾಣ, ಅಪಾನ ವ್ಯಾನ, ಉದಾನ, ಸಮಾನಗಳೆಂಬ ಐದು ಪ್ರಾಣಗಳು ನಮ್ಮ ಶರೀರದಲ್ಲಿವೆ. ನಮಗೆ ಐದು ಇಂದ್ರಿಯಗಳಿವೆ. ಈ ಪಂಚಕಗಳ ಪ್ರತೀಕವಾಗಿ ಎರಡು ಕೈಗಳ ಹತ್ತು ಬೆರಳುಗಳನ್ನು ಸೇರಿಸಿದರೆ ಶರೀರ ಮತ್ತು ಪ್ರಾಣಗಳ ಸೇರ್ಪಡೆಯಿಂದ ನಾವು ಇದಿರಿಗೆ ನಿಂತಂತಾಗಿ ಶರೀರವನ್ನು, ಹೃದಯದ -ಉಸಿರಿನ ಹತ್ತಿರದವರೆಗೆ ತಂದು ತಲೆಬಾಗಿ ನಮಸ್ಕರಿಸುವುದು ಶಾಸ್ತ್ರೀಯ ಕ್ರಮ. ಶರೀರದಲ್ಲಿರುವ ಪಂಚ ಪ್ರಾಣಗಳೂ, ಪಂಚ ಇಂದ್ರಿಯಗಳು ನಿನ್ನ ಮುಂದೆ ಒಂದಾಗಿ ಬಾಗಿ ವಂದಿಸುತ್ತವೆ ಎಂಬುದರ ಸಂಕೇತವೇ ಕೈ ಮುಗಿದು ಮಾಡುವ ನಮಸ್ಕಾರ.

ನಾವು ಮೊದಲೇ ತಿಳಿದಂತೆ ನಮ್ಮದು ಭಕ್ತಿ, ಯೋಗ, ಜ್ಞಾನಗಳಿಗೆ ಮಹತ್ವ ನೀಡಿದ, ಆ ಕ್ಷೇತ್ರದಲ್ಲಿ ಕೃಷಿಮಾಡಿದ ಪಾವನ ದೇಶ. ನಮ್ಮಲ್ಲಿ ಬುದ್ಧಿಗೆ ಬಹಳ ಬೆಲೆ. ಜ್ಞಾನಕ್ಕೆ ಉನ್ನತ ಸ್ಥಾನ, ಬ್ರಹ್ಮಜ್ಞಾನಕ್ಕಂತೂ ಪರಮೋಚ್ಚಸ್ಥಾನ. ನಾವು ಇಹಕ್ಕಿಂತ ಹೆಚ್ಚು ಪರಕ್ಕೆ ಒತ್ತು ನೀಡಿದವರು. ಋಷಿಮುನಿಗಳ ಪರಂಪರೆಯಲ್ಲಿ ಬೆಳೆದ ನಾವು ಎಲ್ಲದರಲ್ಲಿಯೂ ದೇವರನ್ನು, ದೇವರ ಶಕ್ತಿಯನ್ನು ಸಾನ್ನಿಧ್ಯವನ್ನು ಕಂಡುಕೊಂಡವರು. ನಮ್ಮ ಶರೀರದ ಪ್ರತಿಯೊಂದು ಅಂಗಗಳಿಗೂ ಮಹತ್ವ ನೀಡಿ ಅಲ್ಲಲ್ಲಿಗೆ ಒಂದೊಂದು ದೇವತಾ ಸ್ಥಾನವನ್ನು ಗುರುತಿಸಿ, ಈ ಶರೀರದಲ್ಲಿ ವಿಶ್ವದ ಸಮಸ್ತವೂ ಅಡಗಿದೆಯೆದು ಗುರುತಿಸುತ್ತೇವೆ. ಕಣ್ಣುಗಳಲ್ಲಿ ಸೂರ್ಯಚಂದ್ರರು. ತುಟಿಗಳಲ್ಲಿ ಅಗ್ನಿ, ಮೂಗಿನಲ್ಲಿ ವಾಯು, ಭುಜಗಳಲ್ಲಿ ದಿಕ್ಕುಗಳು ಗುರುತಿಸಲ್ಪಡುತ್ತವೆ. ಹಾಗೇ ಕಿವಿಗಳಲ್ಲಿ ಗಂಗೆ ಯಮುನೆಯರ ಸಾನ್ನಿಧ್ಯವನ್ನು ಗುರುತಿಸಲಾಗುತ್ತದೆ. ನಿಧಾನವಾಗಿ ಯೋಚಿಸಿದರೆ ಈ ಸಾನ್ನಿಧ್ಯ ಕಲ್ಪನೆಗೆ ಅರ್ಥ ದೊರೆಯುತ್ತದೆ. ಬೆಳಕು ನೀಡುವ ಸೂರ್ಯಚಂದ್ರರು ಕಣ್ಣುಗಳಲ್ಲಿದ್ದಾರೆಂದು ಭಾವಿಸುವುದು ಕಣ್ಣುಗಳ ಉಪಯುಕ್ತತೆಯನ್ನು ಅರಿತರೆ ಅರ್ಥವಾಗುತ್ತದೆ. ಅಂತೆಯೇ ವಾಯುವಿನ ಅಸ್ತಿತ್ವ ಮೂಗಿನ ಹೊಳ್ಳೆಗಳಲ್ಲಿಯೂ ಸರಿ. ಕಿವಿಗಳು ಜ್ವರ ಬಂದಾಗಲೂ ತಣ್ಣಗೆ ಇರುತ್ತವೆ–ಎಂಬುದು ಅನುಭವ. (ಇದು ಪಿಡುಗಿನ ಜ್ವರಕ್ಕೆ ಅಪವಾದ) ಅಲ್ಲದೆ ಕಿವಿಗಳಲ್ಲಿ ಅತ್ಯಂತ ಪವಿತ್ರ ಲೋಹ ಚಿನ್ನವನ್ನು ಧರಿಸುತ್ತೇವೆ. ಇತ್ತೀಚಿನ 'ಆಕ್ಯುಪಂಕ್ಚರ್' ಚಿಕಿತ್ಸೆಯ ತಜ್ಞರು ಕಿವಿ ಮೂಗುಗಳ ಚುಚ್ಚುವಿಕೆಯನ್ನು ಕೆಲವು ಶಾರೀರಿಕ ವೈಕಲ್ಯಕ್ಕೆ ತಡೆಯಾಗಿ ಪರಿಗಣಿಸಿದ್ದಾರೆ. ಕಿವುಡು, ಮೂಗು ಸುರಿಯುವಿಕೆಗಳು ಕ್ರಮಬದ್ಧವಾದ ಕಿವಿ ಮೂಗು ಚುಚ್ಚುವಿಕೆಯಿಂದ ಸಾಮಾನ್ಯವಾಗಿ ಬರುವುದಿಲ್ಲವೆಂದು ಹೇಳಿದೆ ಆಯುರ್ವೇದ. ಕಿರುಕಿವಿ ಚುಚ್ಚಿಸಿಕೊಂಡವರನ್ನು ಕೇಳಿದಾಗ ಅವರು ಅದಕ್ಕೆ ಕೊಡುವ ಕಾರಣ ಯಾವುದೋ ರೋಗಕ್ಕೆ ಪ್ರತಿಯಾಗಿ ಅಲ್ಲಿ ಚುಚ್ಚಿದರು ಎನ್ನುವುದು. ಹಾಗಾಗಿ ಕಿವಿ ಪವಿತ್ರ ಅಂಗ. ಕಾಲಿನ ಎರಡನೆ ಬೆರಳಿಗೆ ಬೆಳ್ಳಿಯ ಅಥವಾ ಕಂಚಿನ ಉಂಗುರಗಳನ್ನು ಹಾಕುವುದರಿಂದ ಹೆಂಗಸರಿಗೆ ಹೆರಿಗೆ ಸಲೀಸಾಗಿ ಆಗುತ್ತದೆ ಎಂಬ ಸಂಗತಿ ಪ್ರಚಲಿತ ಹಾಗೂ ಸತ್ಯ. ಬಂಜೆತನ ಬಾರದಿರುವಂತೆ ಮದುವೆಯಾದ ಕೂಡಲೇ ಕಾಲಿನ ಎರಡನೆ ಬೆರಳಿಗೆ ಉಂಗುರ ತೊಡಿಸುತ್ತಾರೆ. ಕಾರಣವಿಲ್ಲದೆ ಒಂದು ನಡವಳಿಕೆ ಬರಿಯ ಮೂಢನಂಬಿಕೆಯಾಗಿಯೇ ಕಾಲ ಕಾಲಾಂತರದಿಂದ ಉಳಿದಿದೆ ಎಂದು ನಂಬಲಾಗುವುದಿಲ್ಲ. ವ್ಯವಹಾರವನ್ನು ಆರೋಗ್ಯದ ಜೊತೆಗೆ ಸೇರಿಸಿ ಧರ್ಮದ ಹೆಸರಿನಲ್ಲಿ ಜಾರಿಗೆ ತರುವುದರಲ್ಲಿ ನಮ್ಮವರು ನಿಪುಣರು. ಹಾಗೆ ಬಂದುದು ಕಾಲುಂಗುರ. ಸ್ವಾತಂತ್ರ್ಯ ಬಂದ ನಂತರ ಈಚಿನ ವರ್ಷಗಳವರೆಗೂ ಪೋಲೀಸರು ಕಾಲು ಗಂಟಿನ ಕೆಳಗೆ ಪಾದದವರೆಗೂ ಕಾಲುಗಳಿಗೆ ಉಣ್ಣೆಯ ಪಟ್ಟಿಯೊಂದನ್ನು ಬಿಗಿಯಾಗಿ ಸುತ್ತಿಕೊಳ್ಳುತ್ತಿದ್ದರು. ಇದು ಆಂಗ್ಲರು ತಂದ ಪದ್ಧತಿ. ಬಹಳ ಹೊತ್ತು ನಿಂತು, ನಡೆದು, ಓಡಿ ಕೆಲಸ ಮಾಡಬೇಕಾದ ಪೋಲೀಸು ಪೇದೆಗೆ ಕಾಲು ಸೋಲಬಾರದೆಂದು ಉಣ್ಣೆಯ ಪಟ್ಟಿ ಕಟ್ಟುವ ಕ್ರಮ ಜಾರಿಯಲ್ಲಿತ್ತು. ಈಚೆಗೆ ಅದು ಈ ದೇಶದಲ್ಲಿ ಅಗತ್ಯವಿಲ್ಲವೆಂದು ತೆಗೆದು ಹಾಕಿದರು. ಕಾರಣ : ನಮ್ಮ ದೇಶದ ಕೆಲವು ಪ್ರದೇಶಗಳ ಹವಾಮಾನಕ್ಕೆ ಅದು ಬೇಡ. ಇಲ್ಲಿ ಯಾಕೆ ಇದನ್ನು ನೆನಪು ಮಾಡಿದೆನೆಂದರೆ ಕೆಲವು ಪದ್ಧತಿಗಳು ಒಂದು ಕಾಲದಲ್ಲಿ ಬೇಕಾಗಿದ್ದವು–ಇಂದು ಬೇಡವಾಗಿವೆ. ಹಾಗಾಗಿ ಅವು ನಶಿಸಿವೆ. ಕೆಲವು ಇಂದಿಗೂ ಬೇಕಾದುವು ಅರಿಯದೆ, ಮರೆತು ಇಲ್ಲವಾಗಿವೆ.

ಆಕಳಿಸುವಾಗ, ಸೀನುವಾಗ, ಕೆಮ್ಮುವಾಗ ಬಾಯಿಗೆ ಕೈ, ಬಟ್ಟೆ ಅಡ್ಡ ಹಿಡಿಯುವುದು ಸಭ್ಯತೆಯ ಲಕ್ಷಣ. ಆಕಳಿಸಿದರೆ ಸೀನು ಬಂದರೆ 'ನಾರಾಯಣ', 'ಹರಿಹರಿ', 'ಶಿವಶಿವ' ಎಂದು ದೇವರ ಹೆಸರು ಹೇಳುವುದು ಮೂಢನಂಬಿಕೆಯಲ್ಲ. ಹಾಗೆಂದು ಮಾತು ಹೊರಡಿಸುವುದು ಆಕಳಿಕೆ, ಸೀನುವಿಕೆಯಲ್ಲಿ ಏರುಪೇರಾದ ಮುಖದ ಸ್ನಾಯುಗಳನ್ನು ಮೊದಲಿನ ಯಥಾಸ್ಥಿತಿಗೆ ತರಲು. ಬೇರೇನಾದರೂ ಮಾತಾಡಬಹುದು. ಅದರ ಬದಲು ದೇವರ ಹೆಸರು ಹೇಳುವುದ ಸೂಕ್ತವೆಂಬ ನಂಬಿಕೆ. ಆದರೆ ಅದರ ಹಿನ್ನೆಲೆಯಲ್ಲಿ ಇರುವುದು ಶರೀರ ವಿಜ್ಞಾನ. ಹಾಗಾಗಿ ಬೇಕಾದರೆ ದೇವರ ಹೆಸರು ಹೇಳಬಹುದು– ಇಲ್ಲವಾದರೆ 'ಸ್ಸಾರೀ' ಅಂತಲಾದರೂ ಹೇಳಬಹುದು 'ಸ್ಸಾರೀ' ಅಂತಂದರೆ ನಮ್ಮದಾಗದು. ಹಾಗಾಗಿ ಕೇಳಿಸದಂತೆಯಾದರೂ ದೇವರ ಹೆಸರು ಹೇಳಬಹುದು.

ಗುಂಪು, ಸಭೆಗಳಲ್ಲಿ ನಡೆವಾಗ ಬೇರೊಬ್ಬರಿಗೆ ಕಾಲು ತಗಲಿದರೆ 'ಸ್ಸಾರೀ' ಎನ್ನುವುದು ಆಂಗ್ಲ ಪದ್ಧತಿ. ತುಳಿಸಿಕೊಂಡವರ ಕಾಲಿನ ಕಡೆ ಕೈ ಹಾಕಿ ಕಣ್ಣಿಗೊತ್ತಿಕೊಳ್ಳುವುದು ನಮ್ಮ ಕ್ರಮ– ಈ ಅಭಿನಯ ಭಾರತೀಯ ಕ್ರಮ. ಪುಸ್ತಕ, ಮಗು, ಹಿರಿಯರು, ಹಸುಗಳಿಗೆ ಕಾಲು ತಾಕಿದರೂ ನಾವು ಹೀಗೆ ಮಾಡುತ್ತೇವೆ. ಹಾಗೆ ಮಾಡಿದಾಗ ತಗಲಿಸಿಕೊಂಡವನು ಕ್ಷಮಿಸುತ್ತಾನೆ. ನಮ್ಮ ಹಲವು ಭಾವನೆಗಳಿಗೆ ಮಾತಿಗೆ ಮೊದಲು ಅಭಿನಯ ಮುಂದಾಗುತ್ತದೆ. ಸಂತೋಷ, ದುಃಖ, ಶೋಕ, ಕೋಪಗಳಲ್ಲಿ ನಾವು ಮಾಡುವ ಅಭಿನಯಗಳನ್ನು ಗಮನಿಸಬೇಕು. ಅನಾಯಾಸವಾಗಿ ಉದ್ದೇಶ ಪಡದಿದ್ದರೂ ಭಾವತೀವ್ರತೆಯಲ್ಲಿ ಈ ಇಂಥ ಅಭಿನಯ ತಾನಾಗಿ ಬರುತ್ತದೆ. ಅವುಗಳು ತಲೆಮಾರಿನಿಂದ ತಲೆಮಾರಿಗೆ ಸಾಗಿ ಬರುತ್ತವೆ. ದುಃಖಾತಿರೇಕದಲ್ಲಿ ತಲೆ ಚಚ್ಚಿಕೊಳ್ಳುವುದು, ಕೋಪಾತಿರೇಕದಲ್ಲಿ ಹಲ್ಲು ಕಡಿಯುವುದು, ವಿಕ್ಷಿಪ್ತ ಸ್ಥಿತಿಯಲ್ಲಿ ಕೈಹಿಸುಕುವುದು, ವಿನಯದಲ್ಲಿ ಕೈ ಮುಗಿಯುವುದು, ದೈನ್ಯದಲ್ಲಿ ಅಂಗೈ ಅಗಲಿಸಿ ವಿನೀತಭಾವ ಪ್ರದರ್ಶಿಸುವುದು, ಕೋಪದಲ್ಲಿ ಮುಷ್ಟಿತೋರಿಸುವುದು ಇತ್ಯಾದಿ ನಮ್ಮ ನಡವಳಿಕೆಯಲ್ಲಿ ತಪ್ಪದೆ ಬರುತ್ತವೆ. ಅವನ್ನೆಲ್ಲ ಮೂಢನಂಬಿಕೆ ಎಂದು ಮರೆತು ಬಿಡುವಂತಿಲ್ಲವಲ್ಲ ?

ಹೆಣ್ಣಾಗಲೀ ಗಂಡಾಗಲೀ ಅವರ ಜೀವನದಲ್ಲಿ 'ಮದುವೆ' ಒಂದು ಅತಿ ಮುಖ್ಯ ಸಂಗತಿ. ಬದುಕಿಗೆ ಅರ್ಥ, ಬಾಳಿಗೆ ಸಾರ್ಥಕತೆ ಕೊಡುವ ಕ್ರಿಯೆ ಅದು. ಒಂದೊಂದು ಜನಾಂಗದಲ್ಲಿ ಒಂದೊಂದು ವಿಧದಲ್ಲಿ ಜಾರಿಯಲ್ಲಿರುವ ಮದುವೆಯ ನಡವಳಿಕೆಗಳಲ್ಲಿ ಮೇಲು ನೋಟಕ್ಕೆ ಏಕಾತ್ಮತೆ ಕಂಡು ಬರದಿದ್ದರೂ ಒಳಗೊಳಗೇ ಏಕಸೂತ್ರತೆ ಕಾಣುತ್ತದೆ. ಮೂಲ ತತ್ತ್ವ ಒಂದೇ. ದೇಶ, ಕಾಲ, ಪರಿಸ್ಥಿತಿ, ಸಾಮರ್ಥ್ಯ, ಮನೋಧರ್ಮಗಳಿಗೆ ತಕ್ಕಹಾಗೆ ಕ್ರಿಯಾಕಲಾಪಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ.

ಕೆಲವು ಕಡೆ ಹೆಣ್ಣಿನ ಕಡೆಯವರು ಸಂಬಂಧ ಕುದುರಿಸಲು ಗಂಡಿನ ಮನೆಗೆ ದೂತರನ್ನು ಅಟ್ಟುವುದು ರೂಢಿ. ಇನ್ನು ಕೆಲವು ಕಡೆ ಗಂಡಿನ ಕಡೆ

ಕುಲ, ಗೋತ್ರ, ಬಳ್ಳಿ, ವಂಶ ನೋಡಿ ಸಂಬಂಧ ಕುದುರಿಸುತ್ತಾರೆ. ಜಾತಕ, ನಕ್ಷತ್ರ, ಗಣಗಳ ಕೂಟ ನೋಡುವುದು ಒಂದು ವಿಧದಲ್ಲಿ ಮುನ್ನೆಚ್ಚರಿಕೆಯ ಕ್ರಮವಾಗಿ. ಗಂಡು ಹೆಣ್ಣಿನ ಸಂಬಂಧ ಶಾಶ್ವತವಾದುದಾದುದರಿಂದ ಅದನ್ನು ಬೆಸೆಯುವಾಗ ಎಲ್ಲವೂ ಸರಿಯಾಗಿ ಇರುವಂತೆ ನೋಡುವುದು ಹಿರಿಯರ ಕರ್ತವ್ಯ.

ಗೋತ್ರಗಳು ಮೂಲ ಪುರುಷನ, ಮೂಲ ಗುರುವಿನ ಹೆಸರಿನಿಂದ ಇರುತ್ತವೆ. ಆ ವಂಶದವರ ಆಚಾರ ವಿಚಾರ ನುಡಿನಡೆಗಳು ಆ ಪರಂಪರೆಯಂತೆ ಇರುತ್ತಿದ್ದ ಕಾಲವಿತ್ತು. ಈಗ ಜನ ಒಂದೆಡೆಯಿಂದ ಇನ್ನೊಂದೆಡೆಗೆ ವಲಸೆ ಹೋಗುವುದರಿಂದ ಜನಜೀವನದ ಆಚಾರ – ವಿಚಾರ, ಆಹಾರ, ವಿಹಾರಗಳಲ್ಲಿ ಏಕರೂಪತೆ ಇಲ್ಲ. ಹಾಗಾಗಿ ಗೋತ್ರದಿಂದ ಪರಂಪರೆಯ ತಿಳಿವು ಬರುವುದು ಸಾಧ್ಯವಿಲ್ಲದಾಗಿದೆ.

ಒಬ್ಬ ಇಂಥ ವಿಶ್ವವಿದ್ಯಾಲಯದ ಸ್ನಾತಕ ಎಂದು ತಿಳಿದರೆ ಆತನ ಅರ್ಹತೆ ತಿಳಿಯುವುದಿಲ್ಲವೆ? ಹಾಗೇ ಇಂಥ ಗೋತ್ರದವನು ಎಂದು ತಿಳಿದಾಗ ಆತನ ಮನೋಧರ್ಮದ ಬಗೆಗೆ ತಿಳಿಯುವುದು ಸಾಧ್ಯವಾಗುತ್ತಿತ್ತು. "ಬಳಿ ನೋಡಿ ಹೆಣ್ಣು ತಾ– ಮರ ನೋಡಿ ಬಳ್ಳಿ ನೆಡು" ಎಂಬ ಒಂದು ಗಾದೆ ಇದೆ. ಅರಿಯದ ಕಡೆ ಹೆಣ್ಣು ಕೊಡುವುದಾಗಲೀ ತರುವುದಾಗಲೀ ಕ್ಷೇಮಕರವಲ್ಲ, ಹಾಗಾಗಿ 'ಕುಲ ಮಲ ನೋಡಿ ಹೆಣ್ಣು ತರಬೇಕು'– ಎಂದು ಹಿರಿಯರು ಹೇಳುತ್ತಿದ್ದರು. ಕುಲವೆಂದರೆ ಅರ್ಥವಾಗುತ್ತದೆ. ಮಲವೆಂದರೆ ? ಮಲವೆಂದರೆ ಇಲ್ಲಿ ಶರೀರದ ಆರೋಗ್ಯವೆಂದಾದರೂ ಆಗಬಹುದು. ಅಥವಾ ಹೆಣ್ಣಿನ ಕಡೆಯ ಜನರ ಶುಚಿತ್ವ–ಇತ್ಯಾದಿ ನೋಡಿ ಎಂದಾದರೂ ಆಗಬಹುದು. ಮದುವೆಯೆಂದರೆ ವಿದೇಶಗಳಂತೆ ಖುಷಿ ಬಂದಾಗ ಕೂಡಿ ಬೇಸರಾದಾಗ ಬಿಸುಟು ಹೋಗುವ ಸಂಬಂಧವಲ್ಲವಲ್ಲ ? ಹಾಗಾಗಿ ಬಹಳ ಯೋಚಿಸಬೇಕಾಗುತ್ತದೆ. ಮನಸ್ಸು, ಮೈ ಒಪ್ಪಿದರೂ ಸಂಸ್ಕಾರ ಮನೋರಚನೆಗಳು ಸರಿಬಾರದೆ ಪ್ರೇಮವಿವಾಹಗಳು ಹಾಳಾಗುವುದುಂಟು. ಹಾಗಾಗಬಾರದೆಂದೇ ಹಿರಿಯರು ಹತ್ತಾರು ನಡವಳಿಕೆಗಳನ್ನು ರೂಢಿಸಿದರು. 'ವಿವಾಹ' ವೆಂಬ ಶಬ್ದದ ಶಾಬ್ದಿಕ ಅರ್ಥ 'ಹೊತ್ತುಕೊಂಡು ಒಯ್ಯು'. ಎಂದು. ಹೆಣ್ಣಿನ ಹೊಣೆ ವಹಿಸಿಕೊಂಡ ಗಂಡು ಆಕೆಯ ನಿರ್ವಹಣೆಯ ಹೊಣೆ ಹೊರುತ್ತಾನೆ. ಅಂದರೆ ಹೆಣ್ಣನ್ನು ಹೊತ್ತುಕೊಂಡು ಒಯ್ಯುತ್ತಾನೆ.

ಇಂಥ ಕ್ರಿಯೆಗೆ ಹಿರಿಯರು, ಗುರುಗಳು, ಜ್ಞಾನಿಗಳು, ದೇವರು ಹಾಗೂ ಜೀವನದ ಮೂಲಾಧಾರವಾದ ಅಗ್ನಿ ಇವುಗಳ ಸಾಕ್ಷಿಯಲ್ಲಿ ಹೆಣ್ಣಿನ ಪಾಣಿಗ್ರಹಣ (ಕೈಹಿಡಿಯುವುದು) ಗಂಡಿನ ಕರ್ತವ್ಯ. ಹಾಗೆ ಮಾಡುವ ಮೊದಲು ಮೇಲೆ ಹೇಳಿದ ಹಿರಿಯರು ಗುರುಗಳು ಮುಂತಾದವರನ್ನು ಅರ್ಚಿಸಿ ಅನುಮತಿ ಬೇಡುತ್ತಾನೆ. ತಾನು ಕೈ ಹಿಡಿದ ಹೆಣ್ಣಿನ ಜೊತೆ ಹಿರಿಯರೆದುರು ಏಳು ಹೆಜ್ಜೆ ನಡೆದು ಸ್ನೇಹ ರೂಪಿಸಿಕೊಳ್ಳುತ್ತಾನೆ. ಆಚರಣೆ, ಸಂಪಾದನೆ, ಬಯಕೆ (ಧರ್ಮ, ಅರ್ಥ ಕಾಮ) ಗಳಲ್ಲಿ ಆಕೆಯೊಡನೆ ಸರಿಸಮಾನವಾಗಿ ವರ್ತಿಸುವೆನೆಂದು ತುಂಬಿದ ಸಭೆಯಲ್ಲಿ ಪ್ರತಿಜ್ಞೆ ಮಾಡುತ್ತಾನೆ. ಆಕೆಯನ್ನು ತನ್ನ ಬಾಳಿನ ಸಂಗಾತಿಯಾಗಿ ಸ್ವೀಕರಿಸಿದ ಗುರುತಾಗಿ ಆಕೆಯ ಕುತ್ತಿಗೆಗೆ 'ಮಂಗಳ ಸೂತ್ರ' ಕಟ್ಟುತ್ತಾನೆ. ಇದಿಷ್ಟು ಮದುವೆಯ ತತ್ತ್ವ. ಇದರಲ್ಲಿ ರೂಪ– ಕ್ರಿಯೆಗಳಲ್ಲಿ ವ್ಯತ್ಯಾಸವಿರಬಹುದು – ಹಿಂದು ಮುಂದಾಗಬಹುದು ಆದರೆ ಮೂಲಾರ್ಥ ಒಂದೇ.

ಕಾಡಿಗೆ, ಕುಂಕುಮ, ಕುಪ್ಪಸ, ಕರಿಬಳೆ, ಕರಿಮಣಿಗಳನ್ನು ಧರಿಸಿದ ಹೆಣ್ಣು ಮುತ್ತೈದೆ ಎನ್ನಿಸಿಕೊಳ್ಳುತ್ತಾಳೆ.

ಮಂಗಳ ಸೂತ್ರದಲ್ಲಿ ಕರಿಮಣಿ ಇರಬೇಕು, ತಾಳಿ ಇರಬೇಕು, ಆ ತಾಳಿ ಇಂಥ ಆಕಾರದಲ್ಲೇ ಇರಬೇಕು ಎಂಬ ವಿಧಿಯನ್ನು ಶಾಸ್ತ್ರ ಹೇಳುವುದಿಲ್ಲ. ಅದು ಆಯಾ ಜನಾಂಗ ಅನುಸರಿಸಿಕೊಂಡು ಬಂದ ಕ್ರಮದಂತೆ ವ್ಯತ್ಯಾಸವಾಗುತ್ತದೆ. ತೆಂಗಿನ ಹೋಳಿನಾಕಾರದ ಗುಂಡಗಿನ, ನಡುವೆ ಚಿಕ್ಕ ಚೂಚಕ ಚಾಚಿರುವ ತಾಳಿ-ಲಕ್ಷ್ಮೀ ದೇವಿಯ–ಅಥವಾ ಪಾರ್ವತೀ ದೇವಿಯ ಕುಚ ಯುಗ್ಮಗಳ ಪ್ರತೀಕ. ಕೆಲವು ಜನಾಂಗದಲ್ಲಿ ವಿಷ್ಣುಧ್ವಜವಿದ್ದು ಅದರಲ್ಲಿ ಶಂಖ ಚಕ್ರಗಳ ಚಿಹ್ನೆ ಇರುತ್ತದೆ. ಇನ್ನು ಕೆಲವರು ಬರಿಯ 'ಅರಸಿನ ಕೊಂಬು' ಕಟ್ಟಿಕೊಂಡಿರುತ್ತಾರೆ. ಬರಿಯ ಚಿನ್ನದ, ಹವಳದ ಕರಿಮಣಿಯ ಗುಂಡುಗಳನ್ನೇ ಪೋಣಿಸಿದ ಮಂಗಲ ಸೂತ್ರಗಳೂ ಇವೆ. ಒಟ್ಟಿನಲ್ಲಿ ಅದು ಮಂಗಲ ಸೂತ್ರ. ವಿವಾಹಿತೆಗೆ ಅದು ಅಗತ್ಯ ಸಂಕೇತ.

ಇನ್ನು ಮದುವೆಯ ವಿಧಿ ವಿಧಾನಗಳೆಲ್ಲವೂ ಸಂತಸ, ಮಂಗಲಕರವಾದುವುಗಳೇ, ಇವೆಲ್ಲವೂ ಹೊಸತಾಗಿ ಒಂದಾದ ಆ ಇಬ್ಬರ ಮನಸ್ಸಿನಲ್ಲಿ ತಮ್ಮ ಸೇರ್ಪಡೆಯ ಬಗೆಗೆ ಪವಿತ್ರ ಭಾವನೆ ಉಂಟಾಗಲು ಪ್ರೇರಕವಾದ ಕ್ರಿಯೆಗಳೇ. ವಧೂವರರು ಮಾಲೆ ಹಾಕಿಕೊಂಡು ಕೈಕೈ ಹಿಡಿದು ಅಗ್ನಿಗೆ ಸುತ್ತು ಬರುವುದಾಗಲೀ ಹಿರಿಯರಿಗೆ ನಮಸ್ಕರಿಸುವುದಾಗಲೀ ದಾನ ಮಾಡುವುದಾಗಲೀ ಅವರ ಒಂದಾಗುವಿಕೆಯ ಸಂತಸ ಪ್ರಕಟಿಸುವ, ಅದಕ್ಕೆ ಹಿರಿಯರ ಹರಕೆ ಬೇಡುವ ಕ್ರಿಯೆಗಳೇ ಆಗಿವೆ. ಜೀವನದಲ್ಲಿ ಒಮ್ಮೆ ಮಾತ್ರ ಸಂಭವಿಸುವ ಈ ಪ್ರಕರಣ ಸಾಯುವ ತನಕವೂ ಹಸುರಾಗಿ ಇರುವಂತೆ ಸಂದರ್ಭಗಳನ್ನು ವರ್ಣರಂಜಿತವಾಗಿ, ಮನರಂಜಕವಾಗಿ ನಾಟಕೀಯವಾಗಿ, ಘಟನಾತ್ಮಕವಾಗಿ ಸೃಷ್ಟಿಸಲಾಗುತ್ತದೆ. ಆರತಿ, ಅಕ್ಷತೆ, ಉರುಟಣೆ, ಓಕುಳಿ, ಊಟ, ಬಡಿಸುವುದು, ಬಾಯಿಗೆ ತುತ್ತಿಡುವುದು, ಬಾಗಿಲು ತಡೆಯುವುದು ಮುಂತಾದ ಸಕಲ ಕೃತ್ಯಗಳೂ ಮಾನಸಿಕ ಆನಂದದ ಸೀಮಾರೇಖೆಯನ್ನು ವಿಸ್ತರಿಸಲು ಇವೆ. ಮದುವೆಯ ಜೊತೆಗೆ 'ಉಡುಗೊರೆ' ಎಂದು ಒಂದು ಕ್ರಮವಿದೆ. ಉಡುಗೊರೆ, ಓದಿಸುವುದು– ಇಡುವುದು, ಕೊಡುವುದು ಇತ್ಯಾದಿ ಅದಕ್ಕೆ ಕ್ರಿಯಾಪದಗಳು ಸೇರುತ್ತವೆ.

ತಮ್ಮ ಮನಸ್ಸಿಗೆ ಹಿತವಾದ ಏನನ್ನಾದರೂ ಕೊಂಡು ತಂದು ವಧೂವರರಿಗೆ ಕೊಟ್ಟರೆ ಅದು ಉಡುಗೊರೆಯಾಗದು. ಸೊಂಟದಿಂದ ಕೆಳಗೆ ಉಡುವ ಬಟ್ಟೆಯನ್ನು ಕೊಟ್ಟರೆ ಮಾತ್ರ ಅದು ಉಡುಗೊರೆಯಾಗುತ್ತದೆ. ಇಲ್ಲದಿದ್ದರೆ ಕೊಡುಗೆ, ಮೆಚ್ಚುಕಾಣಿಕೆ ಅಥವಾ 'ಪ್ರೆಸೆಂಟೇಶನ್' ಆಗಬಹುದು. ಯಾಕೆಂದರೆ ಉಡುವ–ಕೊರೆ–ಉಡುಗೊರೆ ಎಂದೇ ಆ ಪದಕ್ಕೆ ಅರ್ಥ. ಕೊರೆ ಅಂದರೆ ವಸ್ತ್ರವೆಂದೇ ಅರ್ಥ. ಅಲ್ಲದೆ ಮುಂದೆ 'ಉಡು' ಎಂಬ ಕ್ರಿಯಾರೂಪವಿರುವುದರಿಂದ– ವಸ್ತ್ರವನ್ನೇ ಕೊಡಬೇಕೆಂದಾಯಿತು. ಹಾಗೆಲ್ಲಿದೆ ಶಾಸ್ತ್ರ ? ಎಂದು ನೀವು ಕೇಳಬಹುದು. ಶಾಸ್ತ್ರವಿಲ್ಲ. ಅದು ಆಚಾರ. 'ಉಡುಗೊರೆ' ಎಂದು ಹೆಸರಿಸಿ ನೀವು ಕೊಡುವುದಾದರೆ ಅದು ಬಟ್ಟೆಯೇ ಆಗಿರಬೇಕು. ಕೊಡುಗೆ, ಕಾಣಿಕೆಗಳಾದರೆ ಏನಾದರೂ ಆಗಬಹುದು. ಇನ್ನು ಕೆಲವೆಡೆ 'ಮುಯ್ಯಿ ಹಾಕುವುದು' ಇದೆ. ಇದು ಒಂದು ವಿಧದಲ್ಲಿ ಸೋಷಿಯಲ್ ಕಾಂಟ್ರಿಬ್ಯೂಶನ್. ಅಂದರೆ ಸಾಮಾಜಿಕ ಸಹಾಯ ಧನ. ಮದುವೆಯ ವೆಚ್ಚ ಸರಿದೂಗಿಸಲು ಸಹಾಯವಾಗುವಂತೆ ಗಂಡು ಹೆಣ್ಣಿನ ಕಡೆಯ ನೆಂಟರು, ಗಂಡು– ಹೆಣ್ಣಿಗೆ ಮುಯ್ಯಿ ಮಾಡುತ್ತಾರೆ. ಅದನ್ನು ಅವರು– ಅಂದರೆ ತಂದೆ ತಾಯಿ ಮುಂದೆ ಎಂದಾದರೊಂದು ದಿನ ಹಿಂತಿರುಗಿಸಬೇಕು. ಹನಿಕೂಡಿ ಹಳ್ಳವಾಗುವಂತೆ ಮುಯ್ಯಿಗೆ ಸೇರಿದ ಹಣದಿಂದಲೇ ಮದುವೆ ಖರ್ಚು ಸಾಗುವುದಿದೆ. ನಂತರ ನಿಧಾನವಾಗಿ ಸರದಿ ಬಂದಾಗ ಸಲ್ಲಿಸಿದರಾಯಿತು. ಹಾಗಾಗಿ ಮುಯ್ಯಿ ಮಾಡಿದವರ ಹೆಸರು ಬರೆದುಕೊಳ್ಳುತ್ತಾರೆ. ಇದೇನೂ ಕೆಟ್ಟ ನಡವಳಿಕೆಯಲ್ಲ. ಇರಲಿ.

ಬಯಲು ಸೀಮೆಯ ಗ್ರಾಮಾಂತರಗಳಲ್ಲಿ ಮದುವೆ ಮಾಡಿ ಹೆಣ್ಣನ್ನು ಕಳಿಸಿಕೊಡುವಾಗ 'ಬಳ್ಳುಳ್ಳಿ' ನೀಡುತ್ತಾರೆ ಎಂಬ ಸಂಗತಿ ತಿಳಿಯಿತು. ಕುತೂಹಲ ಕೆರಳಿ ಆ 'ಬಳ್ಳುಳ್ಳಿ' ಯಾಕೆ– ಏನು ಹೇಗೆ ಎಂದು ಪರೀಕ್ಷಿಸಿದರೆ ಅದು ಬಳ್ಳುಳ್ಳಿಯಲ್ಲ, 'ಬಳುವಳಿ'– ಎಂದು ತಿಳಿಯಿತು. ಹೆಣ್ಣು ಗಂಡನ ಮನೆಗೆ ಹೋಗುವಾಗ ತನ್ನ ಜೊತೆಗೆ ಕೆಲವು ಪ್ರಮುಖವಾದ ವಸ್ತು–ಸಾಧನ, ಪಾತ್ರೆ ಪರಡಿ ತೆಗೆದುಕೊಂಡು ಹೋಗಬೇಕು. ಅದು ಅವರವರ

ಶಕ್ತ್ಯನುಸಾರವಿರುತ್ತದೆ. ಅದು ಒಂದು ಬಿಂದಿಗೆಯೇ ಆದರೂ ಅದು ಬಳುವಳಿಯೇ. ಒಂದು ಲಾರಿ ತುಂಬ ಸಾಮಾನು ಸರಂಜಾಮು ಇದ್ದರೂ ಹೆಸರು ಬಳುವಳಿಯೆಂದೇ. ಈ ವಸ್ತುಗಳನ್ನು ಹೆಣ್ಣಿನ ಬಳಿಯವರು – ಬಳ್ಳಿಯವರು– ಅಂದರೆ ಬಂಧುಗಳು ಬಳಗದವರು ನೀಡುವುದಾದುದರಿಂದ ಬಳಬಳ್ಳಿ ನೀಡಿದ ವಸ್ತು, ಕ್ರಮೇಣ ಜಾರಿ ಜಾರಿ 'ಬಳುವಳಿ' ಯಾಗಿ ಈ ಬಳ್ಳುಳ್ಳಿಯಾಗಿದೆ. ಆದರೆ ಅರ್ಥ ತಿಳಿಯದೆ ಹೋದರೆ ಅಂಧಾನುಕರಣೆ ಮಾಡುತ್ತ ಬಂದರೆ ಮುಂದೆ ಎಂದಾದರೊಂದು ದಿನ ಹೆಣ್ಣಿನ ಸೆರಗಿಗೆ ಒಂದು ಬೆಳ್ಳುಳ್ಳಿ ಕಟ್ಟಿ ಕಳಿಸಿದರೂ ಕಳಿಸಿಯಾರು;

ನಮ್ಮ ಧಾರ್ಮಿಕ ನಡವಳಿಕೆ–ನಂಬಿಕೆಗಳು ಬುದ್ಧಿ ತರ್ಕಗಳ ಜೊತೆಗೆ ಹೃದಯವಂತಿಕೆ–ಭಾವನೆಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತವೆ. ಶ್ರದ್ಧೆ, ಭಕ್ತಿಗಳನ್ನು ಬುದ್ಧಿ–ಅಹಂಕಾರ–ಗಳ ಮಧ್ಯದಲ್ಲೇ ನಿಂತು ಅಳೆದರೆ ಅರ್ಥಶೂನ್ಯವಾಗಿ ಕಂಡಾವು. ಮನಸ್ಸು ಹಾಗೂ ಅದರಿಂದ ಪ್ರೇರಿತವಾದ ಚಿತ್ತದ ಭಾವನೆಗಳು ಭಕ್ತಿ, ಶ್ರದ್ಧೆಗಳಿಗೆ ನೇರ ನೆರವಾಗುತ್ತವೆ. ಅಂದ ಮಾತ್ರಕ್ಕೆ, ಭಕ್ತಿ ಶ್ರದ್ಧೆಗಳು ತರ್ಕಶೂನ್ಯ, ಬುದ್ಧಿಹೀನವೆನ್ನುವಂತಿಲ್ಲ. ತರ್ಕ, ಬುದ್ಧಿಗಳ ನೆರವು ಕೆಲವು ಸಲ ಬೇಡವಾಗುವ ಸಂದರ್ಭಗಳಿವೆ. ಅಂಥಲ್ಲಿ ಶ್ರದ್ಧೆ ಭಕ್ತಿಗಳು ವಿಕಸಿಸುತ್ತದೆ. ಇದಕ್ಕೆಲ್ಲ ಮಿಗಿಲಾಗಿ ನಮ್ಮಲ್ಲಿ 'ಆತ್ಮ'ವೆಂಬ ಒಂದು ತತ್ತ್ವವಿದ್ದು ಅದು ಮನಸ್ಸು, ಬುದ್ಧಿ ಅಹಂಕಾರ, ಚಿತ್ತಗಳಿಂದಲೂ ಮೇಲೆ ನಿಂತಿರುತ್ತದೆ ಎಂಬ ಸಂಗತಿಯನ್ನು ಮರೆಯಬಾರದು. ಹಾಗಾಗಿ ಆತ್ಮದ ನೆರಳಿನಿಂದ ಪ್ರೇರಿತಗೊಂಡ ಹತ್ತು ಹಲವು ನಡವಳಿಕೆಗಳು ನಮಗೆ ಆತ್ಮೀಯವಾಗುತ್ತವೆ. ಶ್ರದ್ಧೆ ಭಕ್ತಿಗಳಿಂದ ಕೂಡಿರುತ್ತದೆ. ಪ್ರೀತಿ, ವಿಶ್ವಾಸ, ವಾತ್ಸಲ್ಯ, ಸೇವಾಭಾವನೆ, ಭಕ್ತಿ ಶ್ರದ್ಧೆಗಳು ತರ್ಕದ ಇಂಚು, ಪಟ್ಟಿಯಿಂದ ಅಳೆದು ಸುರಿಯುವ ಲೆಕ್ಕಾಚಾರದ ಸಾಧನವಲ್ಲ. ಪ್ರಯೋಗ ಶಾಲೆಯಲ್ಲಿ ಸ್ಥಿರಪಡಿಸುಲಾಗದ ಸಂಗತಿಗಳಿವು. ಸತ್ತವರನ್ನು ಸುಟ್ಟು ಬಂದು ತಲೆ ಬೋಳಿಸಿಕೊಂಡು ಹದಿಮೂರು ದಿನ ಶೋಕ ಆಚರಿಸಿ 'ತಿಥಿ' ಅಂತ ಊರೆಲ್ಲ ಕರೆದು ಎಡೆ ಬಡಿಸುವ ಕೆಲಸ ನಡೆಯುತ್ತದೆ. ಹಾಲು ತುಪ್ಪಗಳನ್ನು ಸುಟ್ಟ ಜಾಗದಲ್ಲಿ ಸುರಿಯುತ್ತಾರೆ. ಅಲ್ಲೊಂದು ಸ್ಮಾರಕ ಕಟ್ಟಿಸುತ್ತಾರೆ. ವರ್ಷ ವರ್ಷವೂ ಸತ್ತ ದಿನದಂದು ಶ್ರಾದ್ಧ ಮಾಡುತ್ತಾರೆ. ಪಿಂಡಪ್ರದಾನ ಮಾಡುತ್ತಾರೆ. ಬೇರೆ ಬೇರೆ ಮತದವರಲ್ಲಿ ಬೇರೆ ಬೇರೆ ವಿಧಿಗಳಿವೆ. ಅದುನಿಕ ಯುಗದ ವಿಜ್ಞಾನಿಗಳಿಗೂ ಸ್ಮಾರಕಗಳನ್ನು ಕಟ್ಟಿಸಲಾಗುತ್ತದೆ. ಲೆನಿನನ ಸಮಾಧಿ– ಗಾಂಧೀ ಸಮಾಧಿಯಂತೇ ಪವಿತ್ರ. ಅಜ್ಞಾದುರೈಯ ಸಮಾಧಿಯಂತೇ ವಿವೇಕಾನಂದರ ಸ್ಮಾರಕವೂ ಪವಿತ್ರ. ಇವುಗಳೆಲ್ಲ ಏನು? ಯಾಕೆ ಇವೆ? ಸಹಸ್ರಾರು ಸ್ಮಾರಕಗಳು ಸ್ಮೃತಿ ಮಂದಿರಗಳು ಜಗತ್ತಿನಾದ್ಯಂತ ಇವೆಯಲ್ಲ. ಇವುಗಳಿಗೆಲ್ಲ ತರ್ಕಬದ್ಧ ಉತ್ತರವೇನು? ಅವು ವ್ಯರ್ಥವೆಂದು ತರ್ಕ ಹೇಳಬಹುದು. ಆದರೆ ಮನಸ್ಸು ಒಪ್ಪುವುದಿಲ್ಲ. ಹಿಂದೂಗಳು ಪಿಂಡಪ್ರದಾನ ಮಾಡಿದರೆ ಬೇರೆಯವರು ಬೇರೆ ರೀತಿಯಲ್ಲಿ ತಮ್ಮ ಪಿತೃಗಳನ್ನು ಸಂತೃಪ್ತಿಗೊಳಿಸಬಹುದು.

ಶ್ರದ್ಧೆ, ಪ್ರೀತಿ, ಭಕ್ತಿ ವಾತ್ಸಲ್ಯಗಳಿಂದ ಶರೀರದ ಅತ್ಯಂತ ಜಟಿಲ ನರಮಂಡಲಗಳಲ್ಲಿ ರಾಸಾಯನಿಕ ಪರಿವರ್ತನೆ ಉಂಟಾಗಿ ತ್ಯಾಗ, ಬಲಿದಾನ, ಸಾಹಸ, ಸುಖಗಳ ಆನಂದದ ಅನುಭೂತಿ ಉಂಟಾಗುತ್ತದೆಂದು ಮನೋವಿಜ್ಞಾನ ಸಾರುತ್ತದೆ.

ಗಂಡ ಹೆಂಡತಿ, ತಾಯಿ ಮಗು, ತಂದೆ ಮಗ, ಗುರು ಶಿಷ್ಯ, ದೇಶ ದೇಶಭಕ್ತರ ನಡುವಿನ ಸಂಬಂಧಗಳು ಸಡಿಲವಾಗದೆ ಸ್ಥಿರವಾಗಿರಲು ತರ್ಕಕ್ಕೆ ನಿಲುಕದ ಸಂಗತಿಗಳು ಕಾರಣವಾಗುತ್ತವೆ. ಅವು ಭಕ್ತಿ ಶ್ರದ್ಧೆಗಳು.

'ಆತ್ಮನಃ ಕಾಮಾಯ ಸರ್ವಂ, ಪ್ರಿಯಂ ಭವತಿ' ಎಂಬ ಉಪನಿಷತ್ತಿನ ಒಂದು ವಾಕ್ಯವಿದೆ. ತನಗಾಗಿ ಎಲ್ಲವೂ ಪ್ರಿಯವಾಗುತ್ತವೆ ಎಂದು ಇದರ ಸರಳ ಅರ್ಥ. ಇಲ್ಲಿ ಆತ್ಮನನ್ನು ಅಹಂಕಾರಕ್ಕೆ ಹೆಸರಿಸಿದರೆ ತನ್ನ ಸುಖಕ್ಕಾಗಿ ಎಲ್ಲವೂ ಪ್ರಿಯವಾಗುತ್ತವೆ. ಎಂದು ಅರ್ಥ ಮಾಡಬಹುದು. ಆತ್ಮನ ಮುಂದೆ ಬುದ್ಧಿ, ತರ್ಕಗಳು ಕುಸಿದು ನಿಲ್ಲುತ್ತವೆ. ಹಾಗೆ ನಮ್ಮ ಪ್ರತಿಯೊಂದು ನಡವಳಿಕೆಗಳಿಗೂ ಅರ್ಥವನ್ನೇ ಹುಡುಕುತ್ತ ಹೋದರೆ ದುಃಖ ಬಂದಾಗ ಅಳುತ್ತೇವೆ–ಸುಖ ಬಂದಾಗ ನಗುತ್ತೇವೆ. ಬೇರೆಯವರ ದುಃಖ ಕಂಡು ಅಳುವುದೇಕೆ? ಇತರರು ನಕ್ಕಾಗ ನಗುವುದೇಕೆ? ಎಂಬ ಪ್ರಶ್ನೆಗೆ ಉತ್ತರ ಸಿಗಲಾರದು. ಹಾಗೆಂದು ಚಿತ್ತದ ವಿಚಿತ್ರ ವೃತ್ತಿಯಲ್ಲಿ ಸಂಭವಿಸುವ ಈ ಭಾವ ವಿಕಾರಗಳಿಗೆ ನಾವು ಬಗ್ಗದೆ ಇರುವುದೂ ಸಾಧ್ಯವಾಗುವುದಿಲ್ಲ. ಅಂಥಲ್ಲಿ ಚಿತ್ತವೇ ವಿಕಾರವಾಗಿ ಹುಚ್ಚು ಹಿಡಿಯಬಹುದು.

ಸಾಂಸಾರಿಕ, ಸಾಮಾಜಿಕ, ವ್ಯಾವಹಾರಿಕ ಜೀವನ ಸುಗಮವಾಗಿರಬೇಕೆಂಬ ಉದ್ದೇಶದಿಂದಲೇ ಶಾಸ್ತ್ರಗಳು, ವಿಧಿಗಳು ಇರುವುದು. ಅವನ್ನು ಅರಿತು ಆಚರಿಸಬೇಕು. ಅಂಥವರಿಗಾಗಿಯೇ ಅವು ಇರುವುದು.

---



# ಗೃಹಲಕ್ಷ್ಮಿ



## ಮೀರ - ಮಹಾದೇವಿ - ಆಂಡಾಳ್

— ಕುಮಾರಿ ಎ. ಎಸ್. ಪಂಕಜ ಎಂ.ಎ.



ಮೀರ, ಮಹಾದೇವಿ ಮತ್ತು ಆಂಡಾಳ್ ಈ ಮೂವರು ಅನುಭಾವಿಗಳಾದ್ದರಿಂದ ಮೂವರಲ್ಲೂ ಭಗವತ್ ಭಕ್ತಿಧಾರೆ ಏಕಪ್ರಕಾರವಾಗಿದೆ. ಅವರವರ ಆರಾಧ್ಯದೇವರು ಬೇರೆಬೇರೆಯಾಗಿರಬಹುದು, ಅಷ್ಟೆ; ಭಗವತ್‌ಪ್ರೇಮ ಮಾತ್ರ ಒಂದೇ ಆಗಿದೆ. ಮೀರಾ ಗಿರಿಧರನ ಆರಾಧಕಿ ಯಾದರೆ ಮಹಾದೇವಿ ಚೆನ್ನಮಲ್ಲಿಕಾರ್ಜುನನ ಆರಾಧಕಿ, ಆಂಡಾಳ್ ರಂಗನಾಥನ ಆರಾಧಕಿ. ಅಲೆಗಳು ಸಮುದ್ರದ ನೀರಿನಿಂದ ಬೇರೆಯಾಗಿ ಕಾಣುವಂತೆ ಮೇಲ್ನೋಟಕ್ಕೆ ಇವರು ಭಿನ್ನ ಪ್ರದೇಶದವರು, ವಿಭಿನ್ನ ಕಾಲದವರು, ವಿವಿಧ ಭಾಷೆಯವರಾದರೂ ಇವರುಗಳ ಅಂತರಂಗದ ಭಕ್ತಿಸಮುದ್ರ ಒಂದೇ.

ಮೀರಳು ತನ್ನ ಬಾಲ್ಯದ ಆರಾಧ್ಯಗಿರಿಧರನನ್ನು ಪೂಜಿಸಿ, ಭಜಿಸಿ, ಅವನೆದುರಿಗೆ ನರ್ತಿಸಿ, ಅವನನ್ನು ಒಲಿಸಿಕೊಳ್ಳಲು ಸರ್ವಾತ್ಮನಾ ಪ್ರಯತ್ನಿಸಿದಳು. ಪ್ರೇಮಾವೇಶದಭರದಲ್ಲಿ ಕಾಲಿಗೆ ಗೆಜ್ಜೆಕಟ್ಟಿಕೊಂಡು ಕುಣಿಯುತ್ತ ಹಾಡುತ್ತಿದ್ದಳು ಗಿರಿಧರನೆದುರಿನಲ್ಲಿ. ಬಾಲ್ಯದಲ್ಲಿ ನೆಟ್ಟ ಅನುರಾಗದ ಬೀಜ ನಂತರ ಮೊಳೆತು ಬೇರೂರಿ ವಿಶಾಲವೃಕ್ಷವಾಗಿ ಬೆಳೆಯಿತು. ಭಕ್ತಿಯ ನೀರೆರೆದು ಅದನ್ನು ಚೆನ್ನಾಗಿ ಬೆಳೆಸಿದಳು ಮೀರ. ಅವಳ ಸ್ವಜನರೇ ಅವಳಿಗೆ ಹಾಡುವುದು, ಕುಣಿಯುವುದು ಮೊದಲಾದುವನ್ನು ನಿಲ್ಲಿಸೆಂದು ಹೇಳಿದರು. ಆದರೆ ಅವಳಿಂದ ಅದು ಸಾಧ್ಯವಾದೀತೆ? ಅವಳ ಉಸಿರೇ ಕೃಷ್ಣ. ಅವನ ಪೂಜೆ, ಅವನ ಅರ್ಚನೆ, ಅವನನ್ನು ನೋಡದೆ, ಅರ್ಚಿಸದೆ, ಭಜಿಸದೆ, ಅವನೆದುರಿಗೆ ಕುಣಿಯದೆ ಅವಳು ಇರಲು ಸಾಧ್ಯವೇ?

ಮೀರಳಂತೆ ಮಹಾದೇವಿಯಕ್ಕನು ಚೆನ್ನಮಲ್ಲಿಕಾರ್ಜುನನೆಂಬ ಲೋಕಪತಿಯನ್ನೇ ಪತಿಯಾಗಿ ವರಿಸಿ ಅವಳು ಮಾಡಿದ ಉಗ್ರಸಾಧನೆ, ಪಡೆದ ಸಿದ್ಧಿ ಆಶ್ಚರ್ಯಕರವಾದವು. ಸತಿಪತಿಭಾವದಲ್ಲಿ ಅವಳು ಹೇಗೆ ಪ್ರಗತಿಹೊಂದುತ್ತ ಪರಿಣತಳಾದಳೆಂಬುದನ್ನು ಸಂಸಾರಹೇಯ, ವಿಕಳಾವಸ್ಥೆ, ಸತಿಪತಿಭಾವ ಇವಕ್ಕೆ ಸಂಬಂಧಿಸಿದ ವಚನಗಳಿಂದ ತಿಳಿಯಬಹುದು.

ಆಂಡಾಳ್‌ಳ ಆರಾಧ್ಯದೇವರು ರಂಗನಾಥ. ಇವಳ ಗುರಿ ರಂಗನಾಥನನ್ನು ಒಲಿಸಿಕೊಳ್ಳುವುದು, ಅವನನ್ನು ಪಡೆಯುವುದೇ ಆಗಿತ್ತು. ಅವನನ್ನು ಎಷ್ಟು ಬಗೆಯಿಂದ ಪ್ರೀತಿಸಿ, ಸ್ತುತಿಸಿ, ಸೇವಿಸಿದರೂ ರಂಗನಾಥ ಒಲಿಯಲಿಲ್ಲ. ಆಂಡಾಳ್‌ನ ಚಿಂತೆ ಆತಂಕಗಳು ಪ್ರಬಲವಾದವು. ಹಿಂದೆ ಗೋಪಿಯರು ಕೃಷ್ಣನನ್ನು, ಅವನ ಪ್ರೇಮವನ್ನು ಪಡೆಯುವುದಕ್ಕಾಗಿ ಆಚರಿಸಿದ ಕಾತ್ಯಾಯನೀ ವ್ರತವನ್ನು ತಾನೂ ಆಚರಿಸಿ ಭಗವಂತ ರಂಗನಾಥನಲ್ಲಿ ಐಕ್ಯಳಾಗುವಳು. ಇವಳ ಕೃತಿಗಳಾದ 'ತಿರುಪ್ಪಾವೈ' ಮತ್ತು 'ನಾಚ್ಚಿಯಾರ್ ತಿರುಮೊಳಿ' ಕೃಷ್ಣಪ್ರೇಮಪೂರ್ಣವಾಗಿದೆ. ಪುರುಷೋತ್ತಮನಾದ ಈಶ್ವರನೊಬ್ಬನೇ ಪತಿ, ಮಿಕ್ಕ ಜೀವಾತ್ಮರೆಲ್ಲ ಸತಿಯರು ಎಂಬ ಉನ್ನತ ಭಾವಗಳ ಸಮಾವೇಶ ಇವಳ ಕೃತಿಗಳಲ್ಲಿ ಅಡಗಿವೆ.

ಮೀರಾಬಾಯಿ ತನ್ನ ಪಾರಲೌಕಿಕ ಪತಿಯಾದ ಕೃಷ್ಣನನ್ನು ಹುಡುಕುತ್ತ ವೃಂದಾವನಕ್ಕೆ ಹೋಗಿ ಎಲ್ಲೆಡೆ ಕೃಷ್ಣನ ಅಸ್ತಿತ್ವವನ್ನು ಕಂಡು ಅನುಭವಿಸಿ, ಅವನನ್ನು ಕುರಿತು ಎಷ್ಟೋ ಪದಗಳನ್ನು ಹಾಡಿದಳು, ದ್ವಾಪರ ಯುಗದ ವ್ರಜಗೋಪಿಕೆಯರ ಅನನ್ಯಪ್ರೇಮ ಭಕ್ತಿಗಳನ್ನೇ ಅನುಕರಿಸುತ್ತಿದ್ದಳು. ಅದನ್ನೇ ತನ್ನ ಪದಗಳಲ್ಲಿ "ಪೂರ್ವ ಜನಮಕೀ ಪ್ರೀತ್ ಪುರಾಣಿ" ಎಂದು ಹಾಡಿದ್ದಾಳೆ. "ಮೈತೋ ದಾಸಿ ಜನಮ ಜನಮಕೀ" ಎಂದೂ ತನ್ನನ್ನು ಕರೆದು ಕೊಂಡಿದ್ದಾಳೆ. ತನ್ನ ಸ್ವಾಮಿ ಸದಾ ತನ್ನ ಕಣ್ಣಲ್ಲೇ ಇರಬೇಕೆಂದು ಇವಳ ಬಯಕೆ. —"ಬಸೊ ಮೇರೆ ನೈನನಮೇಂ ನಂದಲಾಲ್". ಅವನ ವಿರಹದ ನೋವು ಅವಳಿಗೇ ಗೊತ್ತು, ಗಾಯದ ನೋವು ಗಾಯವಾದವನಿಗೇ ತಿಳಿಯುವಂತೆ. ಇದೇ ಭಾವವನ್ನು ಮಹಾದೇವಿಯೂ "ನೊಂದ ನೋವ ನೋಯದವರೆತ್ತ ಬಲ್ಲರು?" ಎಂದಿದ್ದಾಳೆ. "ನಿನ್ನನ್ನು ನೋಡದೆ ತನ್ನ ಮನಸ್ಸಿಗೆ ಶಾಂತಿ ಇಲ್ಲ, ಒಂದು ಸಲ ನನಗೆ ದರ್ಶನ ಕೊಡು ಗಿರಿಧರನೇ!" ಎಂದು ತನ್ನ ಉತ್ಕಟ ಪ್ರೇಮಾನುರಕ್ತಿಯನ್ನು ಹಲವಾರು ಪದದಳಲ್ಲಿ ಹಾಡಿದ್ದಾಳೆ ಮೀರಾ. ಅವನನ್ನು ನೋಡದೆ ಅವಳಿಗೆ ಹಗಲು ಹಸಿವಿಲ್ಲ, ರಾತ್ರಿ ನಿದ್ದೆ ಇಲ್ಲ. ಸದಾ ಅವನ ನಿರೀಕ್ಷೆಯಲ್ಲಿದ್ದರೂ ಯಾವ ದಾರಿಯಿಂದಲೋ ಅವನು ಬಂದುಬಿಟ್ಟರೆ? ಆದ್ದರಿಂದ ದಾರಿಯೆಲ್ಲ ಗುಡಿಸಿ, ತನ್ನ ಕಣ್ಣೀರಿನಿಂದಲೇ ಸ್ವಚ್ಛವಾಗಿ ತೊಳೆದಿಡುತ್ತಾಳೆ. ಗಿರಿಧರನಲ್ಲಿ ಇವಳ ಪ್ರೀತಿ ಎಷ್ಟು ತೀವ್ರವಾಗಿತ್ತೆಂದರೆ "ಅವನು ಕರೆಯಲಿ ಬಿಡಲಿ ನಾನಂತೂ ಅವನ ಮನೆಗೆ ಹೋಗುತ್ತೇನೆ, ಅವನೇ ನನ್ನ ನಿಜವಾದ ಪ್ರಿಯತಮ" ಎಂದು ನಿಸ್ಸಂಕೋಚವಾಗಿ ಹಾಡಿದ್ದಾಳೆ.

ಆಂಡಾಳ್‌ನ ತಿರುಪ್ಪಾವೈಯಲ್ಲಿಯ ಕೈಂಕರ್ಯ ಭಾವವೇ ಮೀರಳ "ಚಾಕರ ರಾಖೋಜೀ" ಎಂಬ ಪದದಲ್ಲಿ ಪ್ರತಿಬಿಂಬಿತವಾಗಿದೆ. ವರ್ಣನೆ ಬೇರೆ ಬೇರೆ ಯಾದರೂ ಭಾವನೆ ಒಂದೇ. ಮೀರಳ ಈ ಪದದಲ್ಲಿ ಅವನ ಸೇವೆದರ್ಶನಗಳಿಗಾಗಿ ಚಾಕರಿಯೇ ಹೊರತು ಇನ್ನಾವ ಪ್ರತಿಫಲಾಪೇಕ್ಷೆಯಿಂದಲ್ಲ. ಮಹಾದೇವಿಯಲ್ಲಿ ಇದೇ ಭಕ್ತಿ ಗುರು–ಲಿಂಗ– ಜಂಗಮಾರಾಧನೆಯ ರೂಪದಲ್ಲಿ ವ್ಯಕ್ತವಾಗಿದೆ. "ಗಿರಿಧರನು ನನ್ನನ್ನು ಮಾರ ಬಯಸಿದರೆ ಅದಕ್ಕೂ ನಾನು ಸಿದ್ಧ" ಎಂದಿದ್ದಾಳೆ ಮೀರ. ನಾನು ಅವನವಳು, ಅವನು ನನ್ನನ್ನು ಏನು ಬೇಕಾದರೂ ಮಾಡಬಹುದು ಎಂಬ ಆದರ್ಶ ಸತಿಯ ಧರ್ಮ ಮೀರಳದು. ಇವಳು ಗಿರಿಧರನ ಆದರ್ಶಸತಿ ತಾನೇ! ಅವನ ದರ್ಶನೋತ್ಕಂಠಿತಳಾದ ಮೀರಳಿಗೆ ಒಂದು ಕ್ಷಣವೂ ನೆಮ್ಮದಿ ಇಲ್ಲ. ರಾತ್ರಿ ಬಹು ದೀರ್ಘವಾಗಿ ಕಾಣುತ್ತದೆ. ಕಣ್ಣೀರಿನ ಮಾಲೆ ಪೋಣಿಸುತ್ತ, ನಕ್ಷತ್ರಗಳನ್ನು ಎಣಿಸುತ್ತ ಎಷ್ಟೋ ರಾತ್ರಿಗಳು ಕಳೆದು ಹೋದವು. ಆದರೂ ಅವಳು ತಾಳ್ಮೆಗೆಡದೆ ಮತ್ತೆ ಮತ್ತೆ ಪ್ರಾರ್ಥಿಸುತ್ತಾಳೆ — "ದುಃಖವನ್ನು ದೂರ ಮಾಡುವ ಸುಖದಾಯಿಯಾದ ನೀನು ನನಗೆ ಎಂದು ದರ್ಶನ ಕೊಡುತ್ತೀಯೆ, ಪ್ರಭೋ?"

ಮಹಾದೇವಿಗೆ ಚೆನ್ನಮಲ್ಲಿಕಾರ್ಜುನನ ಸಾಕ್ಷಾತ್ಕಾರವಾಗಿದ್ದಂತೆ ಮೀರಳಿಗೂ ಮೊದಲಿಂದಲೋ ಗಿರಿಧರನ ಸಾಕ್ಷಾತ್ಕಾರವಾಗಿರಬೇಕು. ಆದ್ದರಿಂದಲೇ ಅವಳ ಪದಗಳಲ್ಲಿ ಹಲವೆಡೆ "ನೀನು ಹೇಳಿದ ಅವಧಿ ಮುಗಿಯಿತು, ನೀನು ಇನ್ನೂ ಬರಲಿಲ್ಲ" ಎಂದಿದ್ದಾಳೆ. ಎಂಥ ಸಹಜ ಸುಂದರ ವರ್ಣನೆ! ಮತ್ತೊಂದೆಡೆ "ನಿನಗಾಗಿ ಕಾದು ಕಾದು ನನ್ನ ಕೂದಲೆಲ್ಲ ಬೆಳ್ಳಗಾಯಿತು" ಎಂದು ಹಾಡಿರುವ ಮೀರಳ ಪ್ರೇಮ ಅಲೌಕಿಕವಾದ್ದು. ಇದು ಮೀರಳದೇ ಆದ ವೈಶಿಷ್ಟ್ಯ. ತಲೆಕೂದಲೆಲ್ಲ ಬೆಳ್ಳಗಾದ ಮೀರಳಲ್ಲಿ ದೈಹಿಕ ಸೌಂದರ್ಯವಿಲ್ಲದಿದ್ದರೂ ಭಗವಂತ ಅವಳಿಗೆ ಒಲಿಯುವುದು ಅವಳ ಭಕ್ತಿಗಾಗಿ, ಅವಳ ಮಾನಸಿಕ ಸೌಂದರ್ಯಕ್ಕಾಗಿ.

ಆಂಡಾಳ್‌ನಂತೆ ಮಹಾದೇವಿಯೂ ಸಹ ತನ್ನ ಸರ್ವ ಕ್ರಿಯೆಗಳೂ ಚೆನ್ನಮಲ್ಲಿಕಾರ್ಜುನನಿಗಾಗಿ ಎಂದೇ ಹಾಡಿದ್ದಾಳೆ–"ಉಡುವೆ ನಾನು ಲಿಂಗಕ್ಕೆಂದು...ಅಲಿಸೆನ್ನ ಬಿನ್ನಪವ, ನೀನಲ್ಲದೆ ಮತ್ತಿಲ್ಲ, ನೀನೆ ನನಗೆ ಗತಿ, ನೀನೆ ನನಗೆ ಮತಿಯಯ್ಯಾ ಚೆನ್ನಮಲ್ಲಿಕಾರ್ಜುನಾ" ಎಂಬ ವಚನಗಳಲ್ಲಿ ತನ್ನ ಅಸಹಾಯಕತೆಯನ್ನು ತೋಡಿಕೊಂಡಿದ್ದಾಳೆ. ಮಹಾದೇವಿಯ ಆತ್ಮಸಮರ್ಪಣಾ ಭಾವ 'ಆನು ನಿನಗೊಲಿದೆ... ನೀನಿರಿಸಿದ ಗತಿಯೊಳಗಿಪ್ಪವಳಾನಯ್ಯ' ಎಂಬ ವಚನದಲ್ಲಿ ಸ್ಫುಟವಾಗಿ ವ್ಯಕ್ತವಾಗಿದೆ. ಇವಳಲ್ಲಿ ಶಿವಭಕ್ತಿಯೊಡನೆ ವೈರಾಗ್ಯವೂ ಬಾಲ್ಯದಿಂದಲೇ ಬೆಳೆದು ಬಂದಿತ್ತು. ತನ್ನ ಸ್ವಭಾವ ಜನ್ಯವಾದ ಈ ವೈರಾಗ್ಯದಲ್ಲೂ ಭಗವಂತನ ಬಗ್ಗೆ ಪ್ರೀತಿಭಕ್ತಿಗಳನ್ನೇ ವ್ಯಕ್ತಪಡಿಸಿದ್ದಾಳೆ– "ಹಸಿವಾದೊಡೆ ಭಿಕ್ಷಾನ್ನಗಳುಂಟು. ತೃಷೆಯಾದೊಡೆ ಕೆರೆ ಹಳ್ಳ ಭಾವಿಗಳುಂಟು. ವಸನಕ್ಕೆ ಹಾಳು ದೇಗುಲಗಳುಂಟು. ಚೆನ್ನಮಲ್ಲಿಕಾರ್ಜುನಯ್ಯಾ! ಆತ್ಮ ಸಂಗಾತಕ್ಕೆ ನೀನೆನಗುಂಟು" ಎಂಬ ವಚನದಲ್ಲಿ. ಒಂದೆಡೆ ಅವಳೇ ಹೇಳಿರುವಂತೆ "ಮನಸಿಜನ ತಲೆಯ ಬರಹವ ತೊಡೆದೆನು" ಎಂಬುದು ಅಕ್ಷರಶಃ ನಿಜ.

ವಿರಹಾಗ್ನಿಯಲ್ಲಿ ಬೇಯುತ್ತಿರುವ ಪ್ರಣಯಿಗಳು ದೂತರ ಮೂಲಕ ಸಂದೇಶ ಕಳುಹಿಸುವಂತೆ ಈ ಮೂವರು ಅನುಭಾವಿಗಳೂ ತಮ್ಮ ತಮ್ಮ ಪ್ರೇಮಿಗೆ ತಮ್ಮ ತಮ್ಮ ಪ್ರೇಮಸಂದೇಶವನ್ನು ಕಳುಹಿಸುತ್ತಾರೆ. ಆಂಡಾಳ್ ಮೊದಲು ಮೋಡಗಳನ್ನು ಭಗವಂತನೆಡೆಗೆ ದೂತರನ್ನಾಗಿ ಕಳುಹಿಸುತ್ತಾಳೆ– "ವಿರಹದಿಂದ ನನ್ನನ್ನು ಹೀಗೆ ಕೊರಗಿಸಿ ನೋಯಿಸುವುದು ರಂಗನಾಥನಿಗೆ ನ್ಯಾಯವಲ್ಲ. ನೀವು ಅವನೆಡೆಗೆ ಹೋಗಿ ನನ್ನ ನೋವನ್ನು ತಿಳಿಸಿ, ಅವನಿಗೆ ಬೇಗನೇ ಬಂದು ನನ್ನನ್ನು ಕೂಡಲು ಹೇಳಿ" ಎಂದರೆ, ಮಹಾದೇವಿಯಕ್ಕ "ಅಳಿಸಂಕುಳವೇ, ಮಾಮರವೇ, ಬೆಳದಿಂಗಳೇ, ಕೋಗಿಲೆಯೇ! ನಿಮ್ಮನೆಲ್ಲರನೂ ಒಂದು ಬೇಡುವೆನು; ಎನ್ನೊಡೆಯ ಚೆನ್ನಮಲ್ಲಿಕಾರ್ಜುನದೇವರ ಕಂಡರೆ ಕರೆದು ತೋರಿರೇ!" ಎಂದಳು. ಮೀರಳಿಗೂ ಇದೇರೀತಿಯ ವಿರಹವೇದನೆ. "ಚಾತಕವೇ, ನೀನು ಪ್ರಿಯತಮನ ಮಾತು ಆಡಬೇಡ, ವಿರಹಿಣಿಗೆ ಅದು ಕೇಳಿಸಿದರೆ ಅವಳು ನಿನ್ನ ಕಣ್ಣು ಕಿತ್ತು ಬಿಟ್ಟಾಳು. ನಿನ್ನ ಕೊಕ್ಕು ಕತ್ತರಿಸಿ ಮೇಲೆ ಕರೀ ಉಪ್ಪು ಹಚ್ಚಿಯಾಳು!" ಇದು ಚಾತಕಕ್ಕೆ ಕೊಡುವ ಎಚ್ಚರಿಕೆ! "ನಾನು ಪ್ರಿಯತಮನಿಗೆ ಸೇರಿದವಳು, ಪ್ರಿಯತಮ ನನ್ನವನು. ನೀನಾವಳೇ ಅವನನ್ನು ಪೀ ಪೀ ಎಂದು ಕರೆಯುವವಳು? ನಿನ್ನ ಕೂಗು ನನಗೆ ಹಿತವಾಗಿರುವಂತೆ ನನ್ನ ಪ್ರಿಯತಮನಿಗೆ ಹಿತವಾಗಿದ್ದು ಅವನು ನನ್ನ ಬಳಿ ಬಂದರೆ ನಿನ್ನ ಕೊಕ್ಕಿಗೆ ಚಿನ್ನದ ಕೊಕ್ಕು ಮಾಡಿಸಿ ಹಾಕುತ್ತೇನೆ" ಇದು ಚಾತಕಕ್ಕೆ ಕೊಡುವ ಮೆಚ್ಚು! ತನ್ನ ಮತ್ತು ರಂಗನಾಥನ ಮಿಲನವಾದರೆ ಸಕ್ಕರೆ ಪೊಂಗಲು ಮಾಡಿಕೊಡುವೆನೆಂದು ಹೇಳುವ ಆಂಡಾಳ್‌ನ ಮಾತಿಗೆ ಸಂವಾದಿಯಾಗಿದೆ, ಮೀರಳ ಈ ಮಾತು. ತಾನು ಸಾಕಿದ ಕೋಗಿಲೆಯ ಕಾಲಿಗೆರಗಿ ತನ್ನ ನಲ್ಲನನ್ನು ಕರೆಯುವಂತೆ ಬೇಡಿಕೊಳ್ಳುತ್ತಾಳೆ ಗೋದೆ (ಆಂಡಾಳ್), "ಇಂದು ನಾರಾಯಣ ಬರುವಂತೆ ನೀನು ಕೂಗದಿದ್ದರೆ ನಿನ್ನನ್ನು ಇಲ್ಲಿಂದ ಅಟ್ಟಿಬಿಡುವೆ". ಎಂದು ಹೆದರಿಕೆ ಹಾಕುತ್ತಾಳೆ. "ನಿನ್ನ ಬರವೆನ್ನ ಸುಖದ ಬರವು ಬಾರಯ್ಯಾ" ಎಂದು ಕಾತರಿಸುತ್ತಾಳೆ ಮಹಾದೇವಿ. "ಚೆನ್ನಮಲ್ಲಿಕಾರ್ಜುನ, ಸರ್ವಭರಿತನಾಗಿ ಎನಗೆ ಮುಖತೋರ" ಎಂದು ಮಹಾದೇವಿ ಹಂಬಲಿಸಿ, ಹಾತೊರೆದು ಅಂಗಲಾಚಿದರೆ ಮೀರಾ... "ಹೇ ಪ್ರಿಯತಮ! ನೀನಿಲ್ಲದೆ ಜಗತ್ತೇ ಸಪ್ಪೆಯಾಗಿದೆ ನನಗೆ, ನಿನ್ನ ದರ್ಶನವಿಲ್ಲದೆ ಹುಚ್ಚಿಯಾಗಿದ್ದೇನೆ. ನೀರಿಲ್ಲದ ಮೀನಿನಂತೆ, ಚಂದ್ರನಿಲ್ಲದ ರಜನಿಯಂತೆ, ನನ್ನ ಸ್ಥಿತಿಯೂ ನೀನಿಲ್ಲದೆ ಅರ್ಥಹೀನವಾಗಿದೆ, ತೇಜೋಹೀನವಾಗಿದೆ. ನೀನು ಅಂತರ್ಯಾಮಿ! ನಿನಗೆ ನನ್ನ ಅಂತರಂಗವು ತಿಳಿಯದೇ? ಬೇಗ ಬಾ, ಸ್ವಾಮಿ! ದರ್ಶನಾತುರಳಾದ ಮೀರಳಿಗೆ ದರ್ಶನ ಕೊಟ್ಟು ಕಾಪಾಡು" ಎಂದು ಹಂಬಲಿಸಿ ಕರೆದಿದ್ದಾಳೆ.

ಮೀರಾ ಮಹಾದೇವಿ ಮತ್ತು ಆಂಡಾಳ್‌ರವರ ವಿರಹಜ್ವಾಲೆಯಲ್ಲೂ ಸಾದೃಶ್ಯವಿದೆ. ಭಗವದ್ ವಿರಹದಲ್ಲಿ ಮುಳಗಿರುವ ಈ ಮೂವರೂ ಕನಸಿನಲ್ಲಿ ತಮ್ಮ ತಮ್ಮ ಪ್ರಿಯತಮರನ್ನು ಕಂಡು ಸಂತೋಷಪಡುತ್ತಾರೆ. ಆಂಡಾಳ್ ಶಾಸ್ತ್ರೋಕ್ತವಾಗಿ ಹರಿಯೊಡನೆ ತನ್ನ ಮದುವೆಯಾದಂತೆ ಕಂಡ ಕನಸನ್ನು ಗೆಳತಿಗೆ ಹೇಳಿದ್ದಾಳೆ – "ಸಿಂಹಮುಖದ ಅಚ್ಯುತನ ಕೈಯಲ್ಲಿ ನನ್ನ ಕೈಯಿರಿಸಿ ಅರಳು ಮೊಗೆದು ಸುರಿವ ಕನಸು ಕಂಡನೇ ಗೆಳತಿ! ಕುಂಕುಮ ಹಚ್ಚಿಕೊಂಡು, ಕುಳಿರುಗಂಧ ತೀಡಿ ಸುಂದರವಾಗಿ ಸಿಂಗರಿಸಿದ ಬೀದಿಯಲ್ಲಿ,ಅವನೊಡನೆ ಆಡಿದ ಕನಸಿನಲ್ಲಿ". ಆಂಡಾಳ್‌ನಂತೆ ಮಹಾದೇವಿಯೂ ತನ್ನ ಮದುವೆ ಪರಶಿವನೊಡನೆ ಆದಂತೆ ಕನಸು ಕಂಡಿದ್ದಾಳೆ. 'ಅಕ್ಕ ಕೇಳವ್ವ ಆನೊಂದು ಕನಸಕಂಡೆ, ಚಿಕ್ಕಚಿಕ್ಕ ಜಡೆಗಳ ಸುಲಿಪಲ್ಲ ಗೊರವ ಬಂದೆನ್ನ ನೆರೆದ ನೋಡಾ! ಆತನಪ್ಪಿ ತಳವೆಳಗಾದೆನೆಲೆ ಚೆನ್ನ ಮಲ್ಲಿಕಾರ್ಜುನನ ಕೂಡಿ ಕಣ್ದೆರೆದು ತಳವೆಳಗಾದೆನೆಲೆಗೇ'. ಇವಳ ಶಿವನ ಹಂಬಲ ಎಷ್ಟುಪ್ರಬಲವಾಗಿತ್ತೆಂದರೆ–'ಕಂಗಳೊಳಗೆ ತೊಳಗಿ ಬೆಳಗುವ ದಿವ್ಯಸ್ವರೂಪನ ಕಂಡು ಮಯ್ಮರೆದೆನವ್ವ ಮಣಿಮಕುಟದ ಫಣಿ ಕಂಕಣದ, ನಗೆಮೊಗದ ಸುಲಿಪಲ್ಲ ಸೊಬಗನ ಕಂಡು ಮನಸೋತೆನವ್ವ ಇಂತಾಗಿ ಚೆನ್ನಮಲ್ಲಿಕಾರ್ಜುನನೆನ್ನ ಮದುವಣಿಗ ಆನು ಮದುವಣಿಗಿ ಕೇಳುತಾಯೇ.'

ಆಂಡಾಳ್‌ನ ಮದುವೆ ಕನಸಿನಲ್ಲಿ ಮುತ್ತಿನ ಗೊಂಚಲು ತೂಗುವ ಚಪ್ಪರದ ಕೆಳಗೆ ನಾರಾಯಣನೊಡನೆ ಆಯಿತು. "ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದಕಂಭ, ಪವಳದ ಚಪ್ಪರವನಿಕ್ಕಿ" ಮಹಾದೇವಿಯ ಮದುವೆ ಮಾಡಿದರು:- "ಕಂಕಣ ಕೈದಾರ, ಸ್ಥಿರ ಸೇಸೆಯನಿಕ್ಕಿ, ಚೆನ್ನ ಮಲ್ಲಿಕಾರ್ಜುನನ ಗಂಡಂಗೆನ್ನ ಮದುವೆ ಮಾಡಿದರು" ಎಂದು ಹಾಡಿದ್ದಾಳೆ.

ಮೀರಳು ಗಿರಿಧರನನ್ನು ಮದುವೆಯಾದಂತೆ ಕನಸು ಕಾಣುತ್ತಾಳೆ – "ಮಾಯೀ ಮ್ಹೈನೇ ಸಪನೇ ಮೇ ಪರಣಗಯಾ ಗೋಪಾಲ್" ಆಂಡಾಳ್ ಮಹಾದೇವಿಯರಂತೆ ಮೀರಳು ಹಲವಾರು ಪದಗಳಲ್ಲಿ ತನ್ನ ಕನಸಿನ ವರ್ಣನೆ ಮಾಡಿಲ್ಲವಾದರೂ ಒಂದೇ ಪದದಲ್ಲಿಯೇ ಕೃಷ್ಣನೊಡನೆ ಅವಳ ಮದುವೆಯಾದಂತೆ ಕಂಡ ಕನಸನ್ನು ವರ್ಣಿಸಿದ್ದಾಳೆ.

"ಸಕಳ ಜೀವಾತ್ಮಗಳೆಲ್ಲರೂ ಸತಿ, ಪರಮಾತ್ಮ ಒಬ್ಬನೇ ಪತಿ" ಎಂದು ನುಡಿದಿರುವ ಅನುಭಾವಿಗಳ ಉಕ್ತಿ ಮೀರಾ, ಮಹಾದೇವಿ ಮತ್ತು ಆಂಡಾಳ್‌ರವರ ವಿಷಯದಲ್ಲಿ ಎಷ್ಟು ಸತ್ಯವೆಂಬುವುದು ಗಮನೀಯಾಂಶ. ಈ ಮೂವರು ಸ್ತ್ರೀರತ್ನಗಳಲ್ಲಿರುವುದು ದೈಹಿಕ ರತಿಯಲ್ಲ. ಆತ್ಮರತಿ. ಆಂಡಾಳ್ ಶ್ರೀರಂಗನಾಥನನ್ನೇ ಮದುವೆಯಾಗಿ ಅವನಲ್ಲಿಯೇ ಐಕ್ಯಳಾದಳೆಂಬ ಸಂಗತಿ ನಿರ್ವಿವಾದ. ಅವಳ ತಿರುಪ್ಪಾವೈಯಲ್ಲಿ ಅವಳು ಗೊಲ್ಲವಾಡಿಯ ಹೆಂಗೆಳೆಯರನ್ನು ಎಬ್ಬಿಸುವುದು ಒಂದು ಸಂಕೇತವಷ್ಟೆ. ಆ ರೂಪಕದಿಂದ ಅವಳು ಜೀವಾತ್ಮರೆಲ್ಲರನ್ನು ಎಬ್ಬಿಸಿ ಪರಮಾತ್ಮನೊಡನೆ ಐಕ್ಯವಾಗಲು ಕರೆಯುತ್ತಾಳೆ ಎಂದು ಅರ್ಥೈಸಬೇಕು. ಮಲಗಿದವರನ್ನು ಎಬ್ಬಿಸಿ ಕರೆದುಕೊಂಡು ನೀರಾಟವಾಗಲು ಹೋಗುತ್ತಾಳೆ. ಈ ನೀರಾಟವು ಸಂಕೇತಪೂರ್ಣವಾದ್ದು. ಇದು ಭಗವದ್ ಭಕ್ತಿರಸಪೂರ್ಣವಾದ್ದು;

ಇದರಲ್ಲಿ ಪಾಲುಗೊಳ್ಳಲು ಎಲ್ಲರೂ ಸಮಾನರೇ. ಶತ್ರು ಮಿತ್ರರೆಂಬ, ಗಂಡು–ಹೆಣ್ಣೆಂಬ ಭೇದವಿಲ್ಲ. "ಕೂಡಾರ್ವೆಲ್ಲಾಂ ಶೀರ್ ಗೋವಿಂದಾ" ಎಂಬ ಪಾಶುರವೇ ಇದಕ್ಕೆ ಸಾಕ್ಷಿ. ಹೀಗೆ ಸಾಮಾನ್ಯ ಮಾನವಪ್ರೇಮ ಉದಾತ್ತವಾಗಿ, ಪವಿತ್ರವಾಗಿ, ಪರಿಶುದ್ಧ ದೈವಪ್ರೇಮವಾಗಿ ಪರಿಣಾಮಗೊಂಡಿರುವುದೇ ಆಂಡಾಳ್‌ನ ಕೃತಿಗಳ ವೈಶಿಷ್ಟ್ಯ.

ಅನುಭಾವಿ ಮಹಾದೇವಿಯಲ್ಲಂತೂ ಈ ಸತಿ–ಪತಿ ಭಾವ ತಾನೆ ತಾನಾಗಿ ತಾಂಡವವಾಡುತ್ತಿದೆ. ಇವಳು 'ನುಡಿದುದೆಲ್ಲ ಶಿವತತ್ತ್ವ, ನಡೆದುದೆಲ್ಲ ಶಿವಮಾರ್ಗ'. ಬಾಲ್ಯದಿಂದಲೂ ಚೆನ್ನಮಲ್ಲಿಕಾರ್ಜುನನನೇ ಪತಿಯಾಗಬೇಕೆಂದು ಬಯಸಿ, ಪ್ರೌಢಳಾದ ನಂತರವೂ ಅದೇ ಭಾವನೆ ಬಲಿತು ಬಂದರೂ ಕೌಶಿಕನ ಪ್ರಸಂಗದಿಂದ ಅದು ಪ್ರಕಾಶಕ್ಕೆ ಬರಲು ಅವಕಾಶವಾಯಿತು. ಸಕಲ ಜೀವಾತ್ಮ ಸತಿಗಳಿಗೆ ಪರಮಾತ್ಮನೇ ಪತಿ, ಒಡೆಯ, ಯಜಮಾನ ಎಂಬುಪ್ರಸೇ ಮಹಾದೇವಿಯಕ್ಕನ ತತ್ತ್ವ. ಅದನ್ನೇ ಇವಳು ವಚನಗಳಲ್ಲಿ ಹಾಡಿದ್ದಾಳೆ–"ಇಹಕೊಬ್ಬ ಗಂಡನೇ? ಪರಕೊಬ್ಬ ಗಂಡನೆ? ಪಾರಮಾರ್ಥಕ್ಕೊಬ್ಬ ಗಂಡನೆ? ನನ್ನ ಗಂಡ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ ಮಿಕ್ಕಿನ ಗಂಡರೆಲ್ಲ ಮುಗಿಲ ಮರೆಯ ಬಣ್ಣದ ಬೊಂಬೆಗಳು". ಇದೇ ಭಾವನೆಯನ್ನು ಮೀರ ತನ್ನ ಪದಗಳಲ್ಲಿ "ಭಜನುನ ಚರಣ ಕಮಲ ಅವಿನಾಸೀ" ಎಂದು ಹಾಡಿದ್ದಾಳೆ.

ಮೀರಾಬಾಯಿ ಜೀವನದಲ್ಲಿ ಸತಿ–ಪತಿಭಾವ ಹಾಸು ಹೊಕ್ಕಾಗಿ ಸೇರಿ ಕೊಂಡಿದೆ. ಬಾಲ್ಯದಿಂದಲೂ ಗಿರಿಧರನಲ್ಲಿ ಪ್ರೀತಿ ಇದ್ದರೂ, ಗಿರಿಧರನ ಕ್ರೀಡಾಂಗಣವಾದ ವೃಂದಾವನಕ್ಕೆ ಬಂದಾಗಲೇ ಅವಳ ಸತಿ–ಪತಿ ಭಾವ ಪ್ರಕಟಗೊಂಡು ಬೆಳಕಿಗೆ ಬಂದದ್ದು ಇವಳ ಪದಗಳಲ್ಲಿ ನಿರಂತರವಾಗಿ ಬರುವ 'ಮೇರಿ ಉನ್‌ಕೀ ಪ್ರೀತ್ ಪುರಾಣಿ? 'ಜನಮ ಜನಮ ಕೇ ದಾಸೀರೇ' 'ಪೂರ್ವ ಜನಮ ಕಿ ಪ್ರೀತ್ ಹಮಾರಿ' ಈ ಮಾತುಗಳೆಲ್ಲ ಇವಳ ಭಾರ್ಯಾ ಭರ್ತೃ ಭಾವವನ್ನು ದೃಢಪಡಿಸುವಂಥದ್ದು. ''ಮರಣ–ಜೀವನ್ ಉನ್‌ಕೇಹಾಥ್'' ಎಂಬ ವರ್ಣನೆ ಜೀವಾತ್ಮನ ಅನನ್ಯ ಶರಣ ಭಾವವನ್ನು ವ್ಯಕ್ತಪಡಿಸುತ್ತದೆ. ಇವಳಿಗೆ ಜೀವಂತವಾಗಿರುವಾಗಲಷ್ಟೇ ಭಗವಂತನ ಸಾನಿಧ್ಯ ಬೇಕೆಂದಿಲ್ಲ.

ಹೀಗೆ ಈ ಮೂವರು ಸ್ತ್ರೀ ಅನುಭಾವಿಗಳು ಹುಟ್ಟಿ ಬೆಳೆದ ದೇಶ ಕಾಲಗಳು ಬೇರೆ ಬೇರೆಯಾಗಿದ್ದರೂ ಎಲ್ಲರು ಭಗವದ್ ಭಕ್ತರು. ಅದರಲ್ಲಿಯೂ ಈ ಅನುಭಾವಿಗಳ ಸಾಧನ ಮಾರ್ಗವೂ ಈಶ್ವರನ ಸಾಕ್ಷಾತ್ಕಾರವೂ ಹೆಚ್ಚುಕಡಿಮೆ ಒಂದೇ ರೀತಿಯದಾಗಿರುವಾಗ ಭಾರತದೇಶ, ಭಾರತ ಧರ್ಮ, ಭಾರತ ಸಂಸ್ಕೃತಿಯನ್ನು ಸಮಾನ ಪಿತ್ರಾರ್ಜಿತವಾಗಿ ಅನುಭವಿಸಿದರು. *

---

(12 ನೇ ಪುಟದಿಂದ)

ವಿಲ್ಲವೆಂದು ಹಲುಬುವುದು ಸಾಮಾನ್ಯ. ಮನುಷ್ಯನಿಗೆ ಕಾರ್ಯಗಳನ್ನು ಮಾಡುವ ಶಕ್ತಿ ಇದ್ದಂತೆ ತೋರಿದರೂ ಪರಮಾತ್ಮನ ಸಂಕಲ್ಪವೇ ನೆರವೇರುವುದೆಂದು ಶಾಸ್ತ್ರಗಳು ತಿಳಿಸುತ್ತವೆ. 'ಹರಿ ಚಿತ್ತ ಸತ್ಯ ನರಚಿತ್ತವೆಂಬೋದು ಲವಲೇಶ ನಡೆಯದು' ಎಂದು ಮತ್ತೊಬ್ಬ ಹರಿದಾಸರು ಹೇಳಿರುವರು. ಸೂರ್ಯನ ಪ್ರಕಾಶದ ಮುಂದೆ ಒಂದು ಹಣತೆಯ ದೀಪ ಹೇಗೆ ಬೆಳಕನ್ನು ಬೀರಿದರೂ ನಿಷ್ಪ್ರಯೋಜಕವೋ ಅಂತೆಯೇ ಪರಮಾತ್ಮನ ಇಚ್ಛೆಯ ಎದುರು ಹುಲುಮಾನವನ ಇಚ್ಛಾ ಪ್ರಯತ್ನಗಳು ನಿಸ್ಸತ್ವವೆಂಬ ವಿಜಯದಾಸರು ವಿವರಣೆ ತುಂಬ ಚೆನ್ನಾಗಿದೆ. ವಿಜಯದಾಸರು ದ್ವೈತ ಸಿದ್ಧಾಂತದಲ್ಲಿ ಹುದುಗಿರುವ ಇಂತಹ ನೂರಾರು ಪ್ರಮೇಯಾತ್ಮಕ ವಿಚಾರಗಳನ್ನು ಸುಳಾದಿಗಳಲ್ಲಿ ಹೀಗೆ ವಿಶದೀಕರಿಸಿದ್ದಾರೆ.

ವಿಜಯದಾಸರ ಐನೂರು ಐವತ್ತು ಕೀರ್ತನೆಗಳು ಇಂದು ನಮಗೆ ಲಭ್ಯವಾಗಿವೆ. ಇವನ್ನು ಕೀರ್ತನೆ ಎನ್ನುವುದಕ್ಕಿಂತ 'ಪದಗಳು' ಎಂದು ಕರೆಯುವುದೇ ಹೆಚ್ಚು ರೂಢಿಯಾಗಿದೆ. ಪದಗಳಲ್ಲಿ ಭಕ್ತಿಭಾವ, ಕೀರ್ತನೆಗಳಿಗಿಂತ ಹೆಚ್ಚು ಎನ್ನುವುದುಂಟು. ಹರಿಭಕ್ತಿ ಕೇವಲ ಸ್ತೋತ್ರಪರವಾಗಿರದೆ, ಆತ್ಮ ಶೋಧನಾತ್ಮಕವಾಗಿ, ಭಕ್ತಿಭಾವ ಸಾಂದ್ರತೆ ಸಾಧನೆಯ ಪ್ರಯತ್ನದಲ್ಲಿ ವಿಫಲಗೊಂಡ ಕ್ಷಣಗಳನ್ನು ಗುರುತಿಸಿ, ಅದರ ಸಾಧನೆಗೆ ಅವರ ಮನಸ್ಸು ಹೇಗೆ ಕಾತರಿಸುತ್ತಿತ್ತೆಂಬುದರ ನಿಜವಾದ ಚಿತ್ರ, ಅವರ ಪದಗಳಲ್ಲಿ ಕಂಡುಬರುತ್ತದೆ. ಇದು ಹರಿಭಕ್ತನಾಗಬೇಕೆಂಬ ಧ್ಯೇಯವುಳ್ಳವರಿಗೆ ಒಂದು ದಾರಿದೀಪವಾಗಿದೆ. ಜೇಡ ತನ್ನ ಬಲೆಯನ್ನು ನೇಯುವಾಗ ಹತ್ತಾರು ಬಾರಿ ಅಪಯಶಸ್ಸನ್ನನುಭವಿಸಿ ಕೊನೆಗೆ ಸಿದ್ಧಿ ಶಿಖರವನ್ನು ಮುಟ್ಟುವಂತೆ, ಪರಮಾತ್ಮನಲ್ಲಿ ಭಕ್ತಿಯನ್ನು ಬೆಳೆಸಿಕೊಳ್ಳುವ ಹಂಬಲ ಜೀವರಿಗುಂಟಾದ ಮೇಲೆ ಸಾವಿರಾರು ಜನ್ಮಗಳಲ್ಲಿ ನಾನಾ ವಿಧವಾದ ಅದ್ರಿ ಆಕಾಶಗಳನ್ನು ದಾಟಿದ ಮೇಲೆ ಮಾತ್ರ ಪರಮಾತ್ಮನ ಪಾದಾರವಿಂದಗಳನ್ನು ಕಾಣುವ ಭಾಗ್ಯ ದೊರೆಯುವುದೆಂಬ ಚಿತ್ರವನ್ನು ಇಲ್ಲಿ ಕೊಟ್ಟಿದ್ದಾರೆ. 'ಎಚ್ಚತ್ತು ಇರು ಕಂಡ್ಯ ಮಗನೆ ನಮ್ಮ ಅಚ್ಯುತನಾಗಳೂ ನೆನೆ ಕಂಡ್ಯ ಮನವೆ' ಎಂದು ಮನಸ್ಸನ್ನು ಪ್ರಾರ್ಥಿಸಿದರು. ಚಿತ್ತ ಏಕಾಗ್ರತೆಯನ್ನು ಪರಮಾತ್ಮನ ಧ್ಯಾನದಲ್ಲಿ ಪಡೆಯದೇ 'ಕಾಮ ನೆಗ್ಗಳಿಸಿ, ಕಪಟ ಘನವಾಗಿ, ತಾಮಸಂಗಳ ಬಡಬಲ ಹೆಚ್ಚಿ, ನೇಮಂಗಳು ತಗ್ಗಿ, ನಿಷ್ಠೆ ಬಯಲಾಗಿ ಸತ್ಯಗುಣ ಶೂನ್ಯವಾದಾಗ' ಹರಿದಾಸರು ಪಶ್ಚಾತ್ತಾಪದಿಂದ ಪರಮಾತ್ಮನನ್ನು ಸಂಕೀರ್ತಿಸುವ ಪರಿ ಇವರ ಕೀರ್ತನೆಗಳಲ್ಲಿ ಅನುರಣನಗೊಂಡಿದೆ.

ವಿಜಯದಾಸರ ಕೀರ್ತನೆಗಳೆಲ್ಲವೂ ಹೃದಯದ ಭಕ್ತ್ಯನುಭವದ ಶ್ರೀಮಂತಿಕೆಯಿಂದ ಹೊರಹೊಮ್ಮಿದ ಸುಗಂಧ ಕುಸುಮಗಳು.ಹರಿಭಕ್ತಿ ಸಾಧನೆಗಾಗಿ ಅನವರತವೂ ಅವರ ಅಂತರಂಗ ಪ್ರಯತ್ನಿಸಿದ ವಿವಿಧ ಪರಿಯ ಎಳೆಎಳೆಗಳು, ಅವರ ಕೃತಿಗಳಲ್ಲಿ ಸ್ಪಷ್ಟವಾಗಿ ತೋರುತ್ತವೆ. ಸಾಹಿತ್ಯ ದೃಷ್ಟಿಯಿಂದ ಉನ್ನತವಾದ, ಸಾಮಾಜಿಕ ದೃಷ್ಟಿಯಿಂದ ಅತ್ಯಂತ ಉಪಕಾರವೆನಿಸಿದ, ತತ್ತ್ವಶಾಸ್ತ್ರ ದೃಷ್ಟಿಯಿಂದ ಮಹತ್ತರ ಕಾಣಿಕೆ ನೀಡಿದ ಕನ್ನಡ ನಾಡಿನ ಕೆಲವೇ ಮಹನೀಯರಲ್ಲಿ ವಿಜಯದಾಸರು ಪ್ರಮುಖರು. ಅವರು ರಚಿಸಿರುವ 'ಸದಾ ಎನ್ನ ಹೃದಯದಲ್ಲಿ ವಾಸಮಾಡೋ ಶ್ರೀಹರೇ' 'ಕೈಲಾಸವಾಸ ಗೌರೀಶ;' 'ಎಂದಿಗ ಹುದೋ ನಿನ್ನ ದರುಶನ' 'ಭಕುತ ಜನ ಮುಂದೆ ನೀನವರ ಹಿಂದೆ' 'ಶ್ರೀಮಾರುತನ ಮಾನಿನೀ' 'ನಾಗಿ ಬಾರಯ್ಯ,' 'ಪಾಲಿಸೆ ಪದುಮಾಲಯೇ' 'ಕಾದನಾ ವತ್ಸನ ಹರಿ' 'ಚಿರಂಜೀವಿಯಾಗೆಲೊ ಚಿಣ್ಣ' ಮೊದಲಾದ ಪದಗಳು ಸಂಗೀತ ಸಾಹಿತ್ಯ ದೃಷ್ಟಿಗಳಿಂದ ತುಂಬ ಮೆಚ್ಚತಕ್ಕ ಕೃತಿಗಳಾಗಿರುವುದಲ್ಲದೆ ಇಂದಿಗೂ ಭಕ್ತರ ನಾಲಗೆಗಳ ಮೇಲೆ ನಲಿದಾಡುತ್ತವೆ.

ವಿಜಯದಾಸರ ನಿಂದಾಸ್ತುತಿಗಳಲ್ಲಿನ ವ್ಯಂಗ್ಯ ಹರಿತ ಪರಮಾತ್ಮನ ಸಂದರ್ಶನಕ್ಕಾಗಿ ಪರಿತಪಿಸಿ ಸಹನೆಗೆಟ್ಟಾಗ ಅವನನ್ನು ಕಾಣುವ ಹಂಬಲದಿಂದ ಆಡಿದ ಕೋಪದ ಸಿಡುನುಡಿಗಳಿವು. ತಿರುಪತಿಯಲ್ಲಿ ಶ್ರೀನಿವಾಸನ ಸಂದರ್ಶನ ಭಾಗ್ಯವಿಲ್ಲದೆ ದಾಸರ ಹೃದಯ ಕಂಗೆಟ್ಟಾಗ 'ನಿನ್ನ ದರುಶನಕೆ ಬಂದವನಲ್ಲವೊ' ಎಂಬ ದಿಟ್ಟಕೃತಿ ಅವರ ಶ್ರೀಕಂಠ ಹಾಡಿತು! ತಿರುಪತಿಯಲ್ಲಿನ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ 'ಜಯ ಮಂಗಳ ನಿತ್ಯ ಶುಭ ಮಂಗಳಂ' ಎಂಬ ಪದವನ್ನೂ ರಚಿಸಿದ್ದಾರೆ. ಇಲ್ಲಿ ಪರಮಾತ್ಮನನ್ನು ನಿಂದಿಸುವಂತೆ ಕಂಡರೂ ಅದರ ಕಾರಣ ಸುತ್ತಿಯೇ ಆಗಿದೆ.

ಕರ್ನಾಟಕ ಹರಿದಾಸವಾಙ್ಮಯ ಚರಿತ್ರೆಯಲ್ಲಿ ವಿಜಯದಾಸರ ಸ್ಥಾನ ಉನ್ನತವಾದದು. ವಿಜಯದಾಸರ ವಿಚಾರಸರಣಿಯಿಂದ ಅವರ ಕೃತಿಗಳು ಅತ್ಯಮೂಲ್ಯವೆನಿಸಿರುವಂತೆ ಉದಾತ್ತ ಉದಾರ ಪರೋಪಕಾರ ಜೀವನದಿಂದ ಉದಾತ್ತ ಪುರುಷರೆನಿಸಿಕೊಂಡಿದ್ದಾರೆ.

(10 ನೇ ಪುಟದಿಂದ )

ದೆಂದೂ ಏಕೈಕಸಾಧನನೆಂದೂ, ಅಸಾಧ್ಯ ದರ್ಶನವಲ್ಲವೆಂದೂ, ಬ್ರಹ್ಮವಿದ್ಯೆಗಳಲ್ಲೊಂದೆಂದೂ ಆಚಾರ್ಯರು ಸಿದ್ಧಾಂತಮಾಡಿದ್ದಾರೆ. ಎರಡು ಭಾಗಗಳಾಗಿರುವ ಗ್ರಂಥದ ಪೂರ್ವಭಾಗದಲ್ಲಿ

ಸ್ವರೂಪಲಕ್ಷಾನುಷ್ಠಾನ
ವಿಧ್ಯದೃಷ್ಟೇರ್ನಿಷೇಧತಃ
ಐಕ್ಯಾದಶಕ್ತೇರಖ್ಯಾತೇಃ
ಸಂಪ್ರದಾಯ ವಿರೋಧತಃ ।

ಎಂಬದಾಗಿ ಒಂಬತ್ತು ರೀತಿಯಲ್ಲಿ ಆಶಂಕೆಮಾಡಿ ಉತ್ತರ ಭಾಗದಲ್ಲಿ ಆ ಆಕ್ಷೇಪಗಳಿಗೆ ಪ್ರತ್ಯೇಕವಾಗಿ ಸಮಾಧಾನ ಮಾಡಲಾಗಿದೆ. ಇಲ್ಲಿ ಶತದೂಷಣಿ, ಅಧಿಕಾರ ದರ್ಪಣ, ಸಚ್ಚರಿತ್ರ ರಕ್ಷೆಗಳ ನಿರ್ದೇಶವಿರುವುದರಿಂದ ಅವುಗಳಾದ ಮೇಲೆ ರಚಿತವಾಗಿರಬೇಕು, ಮಂಗಳ ಶ್ಲೋಕದಿಂದ ಇದು ಶ್ರೀರಂಗದಲ್ಲಿ ರಚಿತವಾಗಿರಬೇಕೆಂದು ಊಹಿಸಬಹುದು. ಇದಕ್ಕೆ ಸಿಂಹದೇವನ ಉತ್ತಮ ವ್ಯಾಖ್ಯಾನವಿದೆಯೆಂದು ಸೂಚಿತವಾಗಿದೆ

ಪಾಂಚರಾತ್ರರಕ್ಷಾ :— ಇದು ಪಾಂಚರಾತ್ರಾಗಮದ ಸ್ವಯಂಪ್ರಾಮಾಣ್ಯ ಮತ್ತು ಸಾರ್ವತ್ರಿಕೋಪಯೋಗದ ವಿಷಯಕವಾದ ಚರ್ಚೆಗಳಿಂದ ಕೂಡಿದ ಗ್ರಂಥ. ಯಾಮುನರ 'ಆಗಮ ಪ್ರಾಮಾಣ್ಯ' ಮತ್ತು ಪರಾಶರಭಟ್ಟ ಮತ್ತು ಕೃಷ್ಣಮುನಿಗಳ ಗ್ರಂಥಗಳ ಆಧಾರದ ಮೇಲೆ ರಚಿತವಾದುದು. ಇಲ್ಲಿ ಪಾಂಚರಾತ್ರವನ್ನು ಭಗವಚ್ಛಾಸ್ತ್ರವೆಂಬ ರೀತಿಯಲ್ಲಿ ಖ್ಯಾತಿ ಪಡಿಸಿ ಅದರ ವೇದ — ಅವಿರುದ್ಧತ್ವವನ್ನು ಸ್ಪಷ್ಟಪಡಿಸಿದೆ. ಸಿದ್ಧಾಂತ ವ್ಯವಸ್ಥಾಪನಂ, ನಿತ್ಯಾನುಷ್ಠಾನ ಸ್ಥಾಪನಂ, ನಿತ್ಯ ಗ್ರಂಥವ್ಯಾಖ್ಯಾನಂ ಎಂಬ ಮೂರು ಅಧಿಕಾರಗಳಿಂದ ಕೂಡಿದೆ. ಮೊದಲನೆಯ ಭಾಗವು ಆಗಮ, ಮಂತ್ರ, ತಂತ್ರ ಮತ್ತು ತಂತ್ರಾಂತರಗಳೆಂಬ ಸಿದ್ಧಾಂತ ಚತುಷ್ಟಯ ರೀತ್ಯಾ ವಾಸುದೇವಾರಾಧನ ಕ್ರಮವನ್ನು ಕುರಿತುದು. ಎರಡನೆಯ ಪಾಂಚಕಾಲಿಕ ಕೃತ್ಯಗಳಾದ ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಮತ್ತು ಯೋಗಗಳ ವಿಚಾರಕವಾದುದು. ಕೊನೆಯದು ಪ್ರಪತ್ತಿನಿಷ್ಠನ ಪಾಂಚಕಾಲಿಕ ಕೃತ್ಯಗಳಿಗೆ ಸಂಬಂಧಪಟ್ಟ ಕೆಲವು ಸೂಚನೆಗಳು. ಸಂಪೂರ್ಣ ಭಗವದಾರಾಧನವೂ ಪ್ರಪತ್ತ್ಯನುಷ್ಠಾನವೂ ಆತ್ಮನ ಭೌತಿಕ ಮಾನಸಿಕ ಮತ್ತು ಆಧ್ಯಾತ್ಮಿಕ ಶುದ್ಧೀಕರಣವೆಂಬುದನ್ನು ಇಲ್ಲಿ ವಿವರಿಸಿದೆ.

ಸೇಶ್ವರ ಮೀಮಾಂಸಾ :— ಜೈಮಿನಿಯಿಂದ ಉಪಜ್ಞವಾದ ಪೂರ್ವ ಮೀಮಾಂಸಾ ದರ್ಶನವು ಪೂರ್ವಾಚಾರ್ಯರ ವ್ಯಾಖ್ಯಾ ರೀತ್ಯಾ ನಿರೀಶ್ವರವಲ್ಲ, ಸೇಶ್ವರ ಪರವೇ ಎಂದು ಸಿದ್ಧಾಂತಮಾಡಲು ಜೈಮಿನಿಯ ಸೂತ್ರವನ್ನು ದಿಙ್ಮಾತ್ರದಿಂದ ವ್ಯಾಖ್ಯಾನಮಾಡುವ ಗ್ರಂಥವಿದು. ಕರ್ಮಜ್ಞಾನ ಭಕ್ತಿಗಳಲ್ಲಿ ಸಹಜವಾಗಿ ನೆಲೆಸಿರುವ ಸಂಬಂಧವನ್ನೂ ಸೂಚಿಸುವ ಉದ್ದೇಶದಿಂದ ಜೈಮಿನೀಯ ಮೀಮಾಂಸಾ ಸೂತ್ರಗಳು ವಿವೃತವಾಗಿವೆ. ಇದರಲ್ಲಿ ಮೀಮಾಂಸಾ ಪ್ರಕಾರ ಫಲದಾಯಕವಾಗಿರುವ 'ಅಪೂರ್ವ' ವೆಂಬುದೇ ಈಶ್ವರ ಸಂಕಲ್ಪವೆಂದು ಸಮನ್ವಯಮಾಡಿ ಈಶ್ವರ ಪ್ರಾಧಾನ್ಯವನ್ನೂ ಸಿದ್ಧಾಂತ ಮಾಡಿದ್ದಾರೆ. ಇದಕ್ಕೇ ಶ್ರೀರಾಮಾನುಜರ ಪೂರ್ವೋತ್ತರ ಮೀಮಾಂಸೈಕಕಂಠ್ಯವು ಪ್ರೇರಕವಾಗಿರಬೇಕು. ಇದು ಒಂದನೆಯ ಅಧ್ಯಾಯದ ಎರಡನೆಯ ಪಾದದವರೆಗೆ ಮಾತ್ರ ಉಪಲಬ್ಧವಾಗಿದೆ. ೮೪ ಸೂತ್ರಗಳ ವಿವರಣೆಯಿದೆ. ಇದು ನ್ಯಾಯಪರಿಶುದ್ಧ ಮತ್ತು ತತ್ತ್ವಮುಕ್ತಾಕಲಾಪಗಳು ರಚಿತವಾದ ಮೇಲೆ ಪ್ರಾರಂಭವಾಯಿತು. ಇದು ದೇಶಿಕರಿಗೆ ಪೂರ್ವೋತ್ತರ ಮೀಮಾಂಸಾ ದರ್ಶನಗಳಲ್ಲಿದ್ದ ಪೂರ್ಣಪಾಂಡಿತ್ಯವನ್ನೂ ಪ್ರದರ್ಶಿಸುತ್ತದೆ.

ಶಬರಸ್ವಾಮಿಗೆ ಯಜ್ಞಕೃತ್ಯವೇ ಧರ್ಮ, ಪ್ರಭಾಕರರಿಗೆ ಅಪೂರ್ವ ವೆಂಬುದೇ ಧರ್ಮ. ಕುಮಾರಿಲರಿಗೆ ಯಜ್ಞವೇ ಧರ್ಮ. ವೇದಾಂತ ದೇಶಿಕರಿಗೆ ಈಶ್ವರ ಸಂಕಲ್ಪವೇ ಧರ್ಮ. ಇದರ ಆಧಾರದ ಮೇಲೆಯೇ 'ಪೂರ್ವೋತ್ತರ ಮೀಮಾಂಸೈಕಕಂಠ್ಯ'ವೆಂಬ ಮತ್ತೊಂದು ಕೃತಿಯೂ ವೇದಾಂತ ದೇಶಿಕರಿಂದ ರಚಿತವಾಗಿದ್ದಿರಬೇಕೆಂಬ ಊಹೆ ಇದೆ.

ಮೀಮಾಂಸಾಪಾದುಕಾ :— ಇದು ಸೇಶ್ವರ ಮೀಮಾಂಸಾ ದರ್ಶನಕ್ಕೆ ಉಪೋದ್ಘಾತರೂಪವಾದ ೧೭೩ ಸ್ರಗ್ಧರಾವೃತ್ತಗಳುಳ್ಳ ಗ್ರಂಥ. ಇದರಲ್ಲಿ ಆಚಾರ್ಯರು ಶಾಸ್ತ್ರೋಕ್ತ ಕರ್ಮಗಳು ಮನುಷ್ಯನನ್ನು ಧರ್ಮಸಾಧನೆಗೆ ಹೇಗೆ ಪ್ರಚೋದನೆಗೊಳಿಸುತ್ತವೆಯೋ ಹಾಗೆಯೇ ಸಪ್ತಲೋಕ ಗೃಹಸ್ಥನಾದ ಭಗವಂತನ ಅನುಗ್ರಹ ಸಂಕಲ್ಪವು ಜೀವಗಳನ್ನು ವಿಮೋಚನಗೊಳಿಸುವ ಅವನ ಧರ್ಮಾಚರಣೆಗೆ ಪ್ರಚೋದಿಸುತ್ತವೆಯೆಂಬ ಭಾವವನ್ನೂ ಬಹು ಹೃದಯಂಗಮವಾಗಿ ಸೂಚಿಸಿದ್ದಾರೆ. ದೇಶಿಕರ ಎರಡು ಮೀಮಾಂಸಾ ಗ್ರಂಥರಚನೆಗೂ ಅವರ ಮಾತುಲರಾದ ಆತ್ರೇಯ ರಾಮಾನುಜರಿಂದ ಸೂಚನೆಯು ಬಂದಿರಬೇಕು. ಇವೆರಡು ಗ್ರಂಥಗಳಲ್ಲಿಯೂ ಆಚಾರ್ಯರು ನಿತ್ಯಸತ್ಯನಾದ ಪರಬ್ರಹ್ಮನೇ ಧರ್ಮವೆಂಬುದನ್ನು ಸಿದ್ಧಾಂತಮಾಡಿದ್ದಾರೆ. 'ಮೀಮಾಂಸಾಪಾದುಕೆ'ಯು ನೋಟಕ್ಕೆ ಮಾತ್ರ ಅಪೂರ್ಣವಾಗಿರುವಂತೆ ಕಾಣುತ್ತದೆ. ಆದರೆ ಇದನ್ನು ಆಚಾರ್ಯರೇ 'ನ್ಯಾಸದಿಙ್ಮಾತ್ರಮೇತತ್' ಎಂದು ಅಪ್ಪಣೆ ಕೊಡಿಸಿರುವುದರಿಂದ ಇದು 'ಸೇಶ್ವರ ಮೀಮಾಂಸ'ಕ್ಕೆ ಉಪೋದ್ಘಾತ ರೂಪವಾದ ಪೂರ್ಣ ಗ್ರಂಥವೇ ಆಗಿರಬೇಕು.

ಪರಮತಭಂಗ :— ಇದು ಮಣಿಪ್ರವಾಳ ಗ್ರಂಥ 'ಮಾಧವರ ಸರ್ವ ದರ್ಶನ' ಗ್ರಂಥದ ಮಾದರಿಯದು. ಇದು ಎಲ್ಲ ಮತಗಳನ್ನು ವಿಮರ್ಶಿಸಿ ರಾಮಾನುಜ ದರ್ಶನವೊಂದೇ ಆಧ್ಯಾತ್ಮ ಜೀವನಕ್ಕೆ ಸಹಕಾರಿಯೆಂದು ಘೋಷಿಸುತ್ತದೆ. ಇದರ ೨೪ ಅಧಿಕಾರಗಳಲ್ಲಿ ಸ್ವಸಿದ್ಧಾಂತ ಪ್ರತಿಪಾದಕಪೂರ್ವಕವಾಗಿ ಲೋಕಾಯತ, ಬೌದ್ಧ, ಶಾಂಕರ, ಭಾಸ್ಕರೀಯ, ಯಾದವಪ್ರಕಾಶೀಯ, ವೈಯಾಕರಣ, ವೈಶೇಷಿಕ, ನೈಯಾಯಿಕ, ಕೌಮಾರಿಲ, ಪ್ರಭಾಕರ, ಕಾಪಾಲ, ಯೌಗ, ಪಾಶುಪತಮೊದಲಾದ ಮತಗಳು ವಿಸ್ತಾರವಾಗಿ ನಿರಾಸಮಾಡಲ್ಪಟ್ಟಿವೆ; ಇದಕ್ಕೆ ಕೆ. ಸಿ. ವರದಾಚಾರ್ಯರ ಇಂಗ್ಲೀಷ್ ಭಾಷಾಂತರವಿದೆ.

ವಾದಿತ್ರಯ ಖಂಡನ :— ರಂಗಾಚಾರ್ಯರ ಪುಸ್ತಕ ಸೂಚಿಯಲ್ಲಿ ಹತ್ತನೆಯ ಸಂಪುಟದಲ್ಲಿ ೪೯ನೆಯ ನಂಬರಾಗಿ ಸೂಚಿತವಾಗಿದೆ. ಇದು ಶಂಕರ, ಯಾದವ, ಭಾಸ್ಕರ, ವಾದಿಗಳ ಖಂಡನಾ ರೂಪವಾದರೂ ಅತಿ ಸಂಶಯವೂ ಲಲಿತವೂ ಆದುದು ಈ ಗ್ರಂಥ. ಬಹು ಪ್ರೌಢ ಗ್ರಂಥಗಳಾದ 'ಶತದೂಷಣಿ' 'ಸರ್ವಾರ್ಥಸಿದ್ಧಿ' ಮೊದಲಾದ ಗ್ರಂಥಗಳನ್ನು ರಚಿಸಿದ ಆಚಾರ್ಯರೇ ಇದನ್ನೂ ರಚಿಸಿದ್ದಾರೆ ಎಂಬುದಕ್ಕೆ ಅನೇಕ ಅಂತರ್ಯ ಪ್ರಮಾಣಗಳಿವೆ. ಪ್ರಾರಂಭದಲ್ಲಿ 'ಶ್ರೀಮಾನ್ ವೇಂಕಟನಾಥಾರ್ಯ' ಎಂಬ ಶ್ಲೋಕವೂ ಕೊನೆಯಲ್ಲಿ 'ಕವಿತಾರ್ಕಿಕ ಸಿಂಹಸ್ಯ ವಾದಿತ್ರಯ ಖಂಡನಂ ಸಮಾಪ್ತಂ' ಎಂಬ ವಾಕ್ಯವೂ ಇವೆ. ಆದರೂ ಗ್ರಂಥದ ಶೈಲಿಯ ದೃಷ್ಟಿಯಿಂದ ನೋಡಿದರೆ ಸಂದೇಹವಾಗುತ್ತದೆ.

ಒಟ್ಟಿನಲ್ಲಿ ವೇದಾಂತ ದೇಶಿಕರ ಶಾಸ್ತ್ರಗ್ರಂಥಗಳು ಶ್ರೀರಾಮಾನುಜ ಸಿದ್ಧಾಂತವನ್ನೂ ರೂಢಮೂಲವನ್ನಾಗಿಸಿದುವೆಂಬುದನ್ನೂ ಮುಕ್ತ ಕಂಠದಿಂದ ಘೋಷಿಸಬಹುದು.

---

# ಕಿಶೋರ ಜಗತ್



# ಇಬ್ಬರು ಮಹಾನ್ ವ್ಯಕ್ತಿಗಳು

ವರತಂತುವು ಓರ್ವ ಮಹಾನ್ ಋಷಿ. ಕೌತ್ಸನು ಆತನ ಅಚ್ಚುಮೆಚ್ಚಿನ ಶಿಷ್ಯ. ಅವನು ಅನಾಥ ಬಾಲ್ಯದಲ್ಲಿ ಎಲ್ಲಿಂದಲೋ ಬಂದು ವರತಂತುವಿನ ಆಶ್ರಮದ ಬಾಗಿಲ ಬಳಿ ನಿಂತಿದ್ದ. ಆ ಮುಗ್ಧ ಮನೋಹರ ಬಾಲಕನನ್ನು ಕಂಡು, ವರತಂತುವು ಪ್ರೀತ್ಯಾದರಗಳಿಂದ ಬೆಳೆಸಿ ದೊಡ್ಡವ ನನ್ನಾಗಿ ಮಾಡಿದ. ದೊಡ್ಡವನಾದ ಮೇಲೂ ಕೂಡ ಬಾಲ್ಯದಲ್ಲಿ ಇದ್ದಂತೆಯೆ ಅವನ ಊಟ ಮಾಡುವಿಕೆ, ನಿದ್ದೆಮಾಡುವಿಕೆ, ವೇದಾ ಧ್ಯಯನ,ಶಾಸ್ತ್ರಪಾಠ-ಎಲ್ಲವೂ ಮಹರ್ಷಿಯ ಜೊತೆಯಲ್ಲಿಯೇ ನಡೆಯುತ್ತಿದ್ದವು. ಆದು ದರಿಂದ ಮಹರ್ಷಿಯು ಅವನ ಮೇಲೆ ತನ್ನ ಪೂರ್ಣ ಪ್ರೀತಿಯನ್ನು ಇರಿಸಿದ್ದನು. ತನ್ನ ಸಮಸ್ತ ವಿದ್ಯೆ, ಜ್ಞಾನಗಳನ್ನು ಅವನಿಗೆ ಧಾರೆ ಎರೆದನು. ಕೊನೆಗೆ ಅವನ ವಿದ್ಯಾ- ಭ್ಯಾಸ ಕ್ರಮವು ಕೊನೆಗೊಂಡಿತು. ನಂತರ ದಲ್ಲಿ ಅವನು ಗುರುಗಳ ಆಶ್ರಮದಲ್ಲಿ ಇರು ವಂತಿರಲಿಲ್ಲ. ಆ ಆಶ್ರಮವನ್ನು ಕೌತ್ಸನು ತ್ಯಜಿಸಲೇಬೇಕಾಯಿತು. ಆಗ, ಅವನು ಗುರುಗಳ ಎದುರಿಗೆ ಹೋಗಿ ಕರಗಳನ್ನು ಜೋಡಿಸಿ ನಿಂತ. ವರತಂತುವು ಮುಖವೆತ್ತಿ ಅವನನ್ನು ನೋಡಿ, ಏನು ಎನ್ನುವ ಪ್ರಶ್ನಾರ್ಥಕ ನೋಟವನ್ನು ಬೀರಿದ. ಕೌತ್ಸನು ಬಿನ್ನವಿಸಿಕೊಂಡನು :

"ಭಗವನ್! ಈ ಆಶ್ರಮದಿಂದ ಹೊರಡು ವುದಕ್ಕೆ ಮುಂಚೆ ಗುರು ದಕ್ಷಿಣೆಯನ್ನು ಅರ್ಪಿಸಲು ಇಷ್ಟಪಡುತ್ತೇನೆ. ಏನು ಅರ್ಪಿಸ ಬೇಕೆಂಬುದನ್ನು ತಿಳಿಸಿದರೆ ಧನ್ಯನಾಗುವೆ. ಗುರುಗಳ ಋಣವನ್ನು ತೀರಿಸದಿದ್ದರೆ ನನ್ನ ವಿದ್ಯೆಯು ಅಪೂರ್ಣವಾಗಿ, ವ್ಯರ್ಥ ವಾಗುವುದು."

ವರತಂತುವು ನಗುತ್ತಾ ಹೇಳಿದ :

"ಸ್ವತಃ ನೀನೇ ನನಗೆ ಬಹಳಷ್ಟು ಸೇವೆ ಮಾಡಿದ್ದೀಯೆ. ಆದುದರಿಂದ ಅದೇ ಗುರು ದಕ್ಷಿಣೆ ಆಯಿತು. ಇನ್ನೇನು ಗುರು ದಕ್ಷಿಣೆಯೂ ಬೇಡ."

ಆದರೂ ಕೌತ್ಸನು ನತಮಸ್ತಕನಾಗಿ ನಿಂತೇ ಇದ್ದ. ನಂತರ ಹೇಳಿದ :

"ಭಗವನ್ ! ನನಗೆ ನೀವು ಆಜ್ಞೆ ಯನ್ನು ವಿಧಿಸಲೇಬೇಕು. ನಿಮ್ಮ ಸೇವೆ ಯಲ್ಲಿ ಏನನ್ನಾದರೂ ಅರ್ಪಣೆ ಮಾಡದೆ, ನನಗೆ ಸಂತೋಷವೆಂಬುದೇ ಇಲ್ಲ."

## ರಘುಸುತ

ಗುರುವಿನ ಪ್ರೀತಿಯ ನೈಜಮೂಲ್ಯಾಂಕನ ಮಾಡುತ್ತಿರುವನಲ್ಲ ಈ ಶಿಷ್ಯ, ಎಂತಹ ಮೂಢನಿವನು –ಎಂದು ವರತಂತುವು ತನ್ನ ಷ್ಟಕ್ಕೆ ತಾನೆ ಮನಸ್ಸಿನಲ್ಲಿ ನಕ್ಕ.

ಕೌತ್ಸನು ಒತ್ತಾಯ ಪಡಿಸಿದ ; ಹಠ ವನ್ನೂ ಬಿಡುವಂತಿಲ್ಲ. "ಹಾಗಿದ್ದರೆ ನೀನು ಕಲಿತಿರುವ ಹದಿನಾಲ್ಕು ವಿದ್ಯೆಗಳಿಗೆ ಪ್ರತಿ ಯಾಗಿ ಒಂದೊಂದು ವಿದ್ಯೆಗೆ ಒಂದೊಂದು ಕೋಟಿಯಂತೆ ಹದಿನಾಲ್ಕು ಕೋಟಿ ಸ್ವರ್ಣ ಮುದ್ರೆಗಳನ್ನು ನೀಡು."

ಕೌತ್ಸನು ಈ ಆಜ್ಞೆಯನ್ನು ಶಿರೋ ಧಾರ್ಯ ಮಾಡಿದನು. ಗುರುಗಳ ಚರಣ ಧೂಳಿಯನ್ನು ಶಿರಸ್ಸಿನಲ್ಲಿ ಧರಿಸಿ, ಅಲ್ಲಿಂದ ಹೊರ ಹೊರಟನು. ಅವನು ಗುರುಗಳ ಅಂತೇವಾಸಿ ಶಿಷ್ಯನಾಗಿದ್ದ. ಅಂತಹವನನ್ನು ಪಡೆದು, ಅವನ ಸೇವೆ ಮಾಡುವುದನ್ನು ಅತ್ಯಂತ ಗೌರವಾನ್ವಿತವೆಂದು ಆಗಿನ ಅನೇಕ ರಾಜರು ಗ್ರಹಿಸಿದ್ದರು. ಇದು ಅವನಿಗೂ ತಿಳಿದಿತ್ತು. ಆದುದರಿಂದ ಗುರುಗಳು ತಿಳಿಸಿದ ಗುರುದಕ್ಷಿಣೆಯನ್ನು ಪಡೆಯುವಲ್ಲಿ ಅವನಿಗೆ ಯಾವ ಅನುಮಾನವೂ ಇರಲಿಲ್ಲ.

ಅವನು ನೇರವಾಗಿ ಅಯೋಧ್ಯೆಗೆ ನಡೆ ದನು. ಅಲ್ಲಿ ಸಾಮ್ರಾಟ್ ರಘುವು ರಾಜ್ಯ ಭಾರ ಮಾಡುತ್ತಿದ್ದನು. ತನ್ನ ಅರಮನೆಗೆ ದಯಮಾಡಿಸಿದ ಕೌತ್ಸನನ್ನು ಮಹಾ ಸಂಭ್ರಮದಿಂದ ಎದುರುಗೊಂಡು, ಅರ್ಘ್ಯ ಪಾದ್ಯಗಳನ್ನು ನೀಡಿ, ವಿಧಿವತ್ತಾಗಿ ಪೂಜಿ ಸಿದ. ಇದೆಲ್ಲವನ್ನೂ ಕೌತ್ಸನು ಸುಮ್ಮನೆ, ಮಾತನಾಡದೆ ನೋಡುತ್ತಿದ್ದ. ಪೂಜೆಯು ಮುಗಿದ ಕೂಡಲೆ, ಅವನು ಅಲ್ಲಿಂದ ಹೊರಡಲು ಅನುವಾದ.

ಕೂಡಲೆ ರಘುವು ಆತನ ಎದುರಿಗೆ ಕರ ಜೋಡಿಸಿ, ನಮ್ರಸ್ವರದಲ್ಲಿ ಕೇಳಿದ:

"ಭಗವನ್ ! ತಾವು ನನಗೆ ಯಾವುದೇ ಆಜ್ಞೆಯನ್ನು ನೀಡದೆ ಹೊರಡುತ್ತಿರುವಿರಲ್ಲ! ನನ್ನ ಸೇವೆಯಲ್ಲಿ ಏನಾದರೂ ದೋಷ ವಿತ್ತೇನು ?"

ಕೌತ್ಸನು ಬರುವುದಕ್ಕೆ ಕೆಲವು ತಿಂಗಳುಗಳ ಮುಂಚೆಯೇ ರಘು ಮಹಾರಾಜನು ತನ್ನ ಪರಾಕ್ರಮದಿಂದ ಭೂಮಂಡಲವನ್ನೆಲ್ಲ ಗೆದ್ದು ತಂದ ಅಪಾರ ಐಶ್ವರ್ಯ, ಧನಕನಕಾದಿಗ ಳಿಂದ 'ವಿಶ್ವಜಿತ್' ಎಂಬ ಯಾಗ ಮಾಡಿ, ತನ್ನ ಸರ್ವಸ್ವವನ್ನೂ ದಾನ ಮಾಡಿದ್ದ. ಈ ವಿಚಾರ ಕೌತ್ಸನಿಗೆ ಅಯೋಧ್ಯೆಗೆ ಬರುವು ದಕ್ಕೆ ಮುಂಚೆ ತಿಳಿದಿರಲಿಲ್ಲ ; ಬಂದ ನಂತ ರವೆ ಗೊತ್ತಾದುದು. ಮಹಾರಾಜನು ಮಣ್ಣಿನ ಪಾತ್ರೆಗಳಲ್ಲಿ ಪೂಜಾದ್ರವ್ಯಗಳನ್ನು ಇಟ್ಟು ಪೂಜಿಸಿದ್ದನ್ನು ನೋಡಿ, ತನಗೆ ಅಲ್ಲಿ ಏನೂ ಸಿಗುವುದಿಲ್ಲವೆಂದು ಅವನು ಭಾವಿ ಸಿದ. ಆದುದರಿಂದಲೆ ಅವನು ಎದ್ದು ಹೊರ

ಡುವುದರಲ್ಲಿದ್ದನು. ಮಹಾರಾಜನು ಮತ್ತೆ ಮತ್ತೆ ಆಗ್ರಹ ಪಡಿಸಿದ ಮೇಲೆ, ತಾನು ಬಂದುದೇಕೆಂದು ಅವನು ವಿವರಿಸಿ:

" ರಾಜನ್ ! ನಾನು ನಿನ್ನ ಬಳಿಗೆ ಗುರು ದಕ್ಷಿಣೆಯ ದ್ರವ್ಯಕ್ಕಾಗಿ ಬಂದೆ. ಆದರೆ ನೀನು ನಿನ್ನ ಸರ್ವಸ್ವವನ್ನೂ ದಾನ ಮಾಡಿ ದ್ದೀಯೆ. ಅತಿಥಿ ಸತ್ಕಾರಕ್ಕಾಗಿ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸುವಷ್ಟರ ಮಟ್ಟಿಗೆ ಧನವಿಲ್ಲದವನಾಗಿದ್ದೀಯ. ಇಂತಹ ಸನ್ನಿವೇಶದಲ್ಲಿ ಏನನ್ನು ತಿಳಿಸುವುದನ್ನೂ ಅನುಚಿತವೆಂದುಕೊಂಡೆ. ಆದರೆ ಬಲವಂತ ಪಡಿಸಿದ್ದರಿಂದ ವಿಷಯ ತಿಳಿಸಬೇಕಾಯಿತು. ನೀನು ಸಂಕೋಚ ಪಡಬೇಡ. ನಾನು ಬೇರೆಡೆ ಹೋಗಿ, ನನ್ನ ಅಭೀಷ್ಟವನ್ನು ಪೂರೈಸಿಕೊಳ್ಳುವೆ ; ಗುರುದಕ್ಷಿಣಾ ದ್ರವ್ಯ ವನ್ನೂ ಸಂಪಾದಿಸಿಕೊಳ್ಳುವೆ. " ಎಂದು ಹೇಳಿದ.

ರಘುವಿನ ಬಳಿಯಿಂದ ಯಾವನೇ ಯಾಚಕನು ಏನನ್ನಾದರು ಪಡೆಯದೆ ಹಿಂತಿರುಗುವುದು ಅಸಂಭವವಾದ ವಿಚಾರ ವಾಗಿತ್ತು. ಆಗ ರಘು ಮಹಾರಾಜನು ಕೈ ಮುಗಿದು ಕೌತ್ಸನನ್ನು ಪ್ರಾರ್ಥಿಸಿದನು.

" ಮಹಾತ್ಮನ್! ನನಗೆ ಮೂರು ದಿನಗಳ ಅವಕಾಶ ನೀಡಿ, ನಾನು ನಿಮ್ಮ ಮನದಿಚ್ಛೆ ಯನ್ನು ಪೂರ್ಣಗೊಳಿಸಲು ಗುರುದಕ್ಷಿಣಾ ದ್ರವ್ಯವನ್ನು ಸಂಪಾದಿಸಲು ನಿರ್ವಂಚನೆ ಯಿಂದ ಪ್ರಯತ್ನಿಸುತ್ತೇನೆ. ರಘುವಿನ ಅರಮನೆಯಿಂದ ಯಾರೇ ಆಗಲಿ ನಿರಾಶೆ ಯಿಂದ ಹಿಂತಿರುಗಿದ ಎಂಬ ಅಪವಾದದಿಂದ ನನ್ನನ್ನು ದೂರ ಮಾಡಿ, ನನ್ನನ್ನು ರಕ್ಷಿಸಿ."

ಕೌತ್ಸನು ರಘುಮಹಾರಾಜನ ಆತಿಥ್ಯ ವನ್ನು ಸ್ವೀಕರಿಸಿದನು. ರಘುವು ತನ್ನ ಅಂತಃಪುರಕ್ಕೆ ಹೋಗಲಿಲ್ಲ. ಬದಲಾಗಿ ಯುದ್ಧಕ್ಕಾಗಿ ಇರಿಸಿದ್ದ ರಥವನ್ನೇರಿ, ಮಂತ್ರಾಲೋಚನಾ ಮಂದಿರವನ್ನು ತಲುಪಿ ಯುದ್ಧ ಸಿದ್ಧತೆಯಲ್ಲಿ ನಿರತನಾದನು. ಅವನು ಯೋಚಿಸತೊಡಗಿದನು–'ಭೂಮಿಯ ಮೇಲಿನ ಎಲ್ಲ ರಾಜರುಗಳಿಂದಲೂ ಕಪ್ಪ ಕಾಣಿಕೆಗಳನ್ನು ಪಡೆದಿದ್ದೇನೆ. ಅವರಿಂದ ಮತ್ತೆ, ಈ ಕೂಡಲೇ ಕಪ್ಪ ಕಾಣಿಕೆಗಳನ್ನು ಪಡೆಯಲು ಪ್ರಯತ್ನಿಸುವುದು ಅನ್ಯಾಯ. ಆದುದರಿಂದ ನೇರವಾಗಿ ಧನಾಧೀಶನಾದ ಕುಬೇರನ ಮೇಲೇಕೆ ದಂಡಯಾತ್ರೆ ಮಾಡ ಬಾರದು ?' ಎಂದುಕೊಂಡು ಅದರಂತೆ ನಿಶ್ಚಯಿಸಿ, ಯುದ್ಧಸಿದ್ಧತಾಭೂಮಿಗೆ ತೆರಳಿ, ವ್ಯವಸ್ಥೆಗಳನ್ನು ಮಾಡತೊಡಗಿದನು. ಅಂದು ರಾತ್ರಿ ಅದೇ ರಥದಲ್ಲಿ ಮಲಗಿದನು.

ಮಾರನೆಯ ದಿನ ಬೆಳಗಾಗುತ್ತಲೆ ಕೋಶಾಧ್ಯಕ್ಷನು ಓಡೋಡಿ ಬಂದು 'ಖಜಾನೆ ಯಲ್ಲಿ ಆಕಾಶದಿಂದ ಚಿನ್ನದ ನಾಣ್ಯಗಳ ಮಳೆಯು ಸುರಿಯುತ್ತಿದೆ' ಎಂದು ತಿಳಿಸಿ ದನು. ಅದೊಂದು ದೊಡ್ಡ ಗಣಿಯಾಗಿತ್ತು. ಮಹಾರಾಜನು ಮುಗುಳುನಕ್ಕ. ಧನಾಧೀಶ ನಾದ ಕುಬೇರನು ರಘು ಮಹಾರಾಜನ ಖಜಾನೆಯನ್ನು ತುಂಬುವುದರಲ್ಲೇ ತನ್ನ ಕ್ಷೇಮವಿದೆಯೆಂದು ಭಾವಿಸಿ, ಚಿನ್ನದ ಮಳೆ ಯನ್ನು ಸುರಿಸಿದ್ದನು.

ರಘುವು ಕೌತ್ಸನನ್ನು ಅಲ್ಲಿಗೆ ಕರೆದು ಕೊಂಡು ಹೋಗಿ, ಧನರಾಶಿಯ ಕಡೆ ಬೆರಳು ತೋರಿ ಅದೆಲ್ಲವನ್ನೂ ತೆಗೆದುಕೊಂಡು ಹೋಗುವಂತೆ ತಿಳಿಸಿದ.

ಕೌತ್ಸನು ನಗುತ್ತಾ, " ರಾಜನ್ ! ನಾನು ಇಷ್ಟೊಂದು ಹಣವನ್ನು ತೆಗೆದುಕೊಂಡು ಏನು ಮಾಡಲಿ ? ಗುರುದಕ್ಷಿಣೆಗೆ ಅಗತ್ಯವಾದ ಹದಿನಾಲ್ಕು ಕೋಟಿ ಸುವರ್ಣನಾಣ್ಯಗಳನ್ನು ಮಾತ್ರ ತೆಗೆದುಕೊಳ್ಳುವೆನು. ಉಳಿದುದನ್ನು ದಾನ ಮಾಡು. "

ಸ್ವರ್ಣಾಗಾರದ ಎದುರಿಗೆ ನಿಂತಿದ್ದ ಪ್ರಪಂಚದ ಆ ಇಬ್ಬರು ಮಹಾನ್‌ವ್ಯಕ್ತಿ ಗಳಲ್ಲಿ ಒಬ್ಬರೂ ಸ್ವರ್ಣರಾಶಿಯಿಂದ ಒಂದು ಸಣ್ಣ ನಾಣ್ಯವನ್ನು ಹೆಚ್ಚಿಗೆ ಪಡೆಯಲು ಇಷ್ಟಪಡುತ್ತಿರಲಿಲ್ಲ.

ಹೋಗುವಾಗ, "ಅಯ್ಯಾ! ಸಕಲ ಸದ್ಗುಣ ಭೂಷಿತನೂ, ವಂಶೋದ್ಧಾರಕನೂ ಆಗುವ ಮಗನನ್ನು ಪಡೆ. ಈ ಪ್ರದೇಶ ಸುವರ್ಣ ಖನಿಯೆಂದು ಪ್ರಸಿದ್ಧಿ ಪಡೆದು ದಿವ್ಯತೀರ್ಥ ವಾಗುವುದು. ಈ ದಿನ (ವೈಶಾಖ ಶುಕ್ಲ ದ್ವಾದಶಿ) ಇಲ್ಲಿ ಸ್ನಾನಾದಿಗಳನ್ನು ಮಾಡ ತಕ್ಕವರು ಸಕಲ ಪಾಪ ವಿಮುಕ್ತರಾಗಿ ವಿಷ್ಣುಲೋಕವನ್ನು ಸೇರುವರು." ಎಂದು ಕೌತ್ಸನು ಮಹಾರಾಜನಿಗೆ ವರಪ್ರದಾನ ಮಾಡಿ, ಹರಿಸಿ, ಬೀಳ್ಕೊಂಡನು.

ರಘುವು ಆ ಗಣಿಯನ್ನು ತಾನು ಸ್ವೀಕರಿ ಸದೆ, ಅದರ ಧನವನ್ನು ಬಡಬಗ್ಗರಿಗೆ ದಾನ ಮಾಡಿದ.

*

# ನೋಡು............

ಈ ಮುದ್ದು ಮೂರುತಿಯು ನೆಲೆಸಿಹುದು ನೋಡೂ ।
ಈ ಹೃದಯ ಗಹ್ವರದಲ್ಲಿ ಸುಳಿದಾಡುತಿದೆ ನೋಡೂ ॥
ಶಂಖ ಚಕ್ರ ಗದೆಯಾ ಅಭಯ ಹಸ್ತದಲೀ
ಶಂಕೆಯಿಲ್ಲದೆ ಜಗವ ರಕ್ಷಿಸುತ್ತಿದೆ ನೋಡೂ ॥

ಸಪ್ತಗಿರಿಗಳ ನಡುವೆ ಕಾನನದ ಮಧ್ಯದಲಿ ।
ಸತ್ಪಥವ ತೋರುತಲಿ ಗಿರಿಯ ಗಹ್ವರದಲ್ಲಿ ॥
ಎಂಥ ತೇಜೋಮೂರ್ತಿ ನಯನಾಭಿರಾಮವೂ ।
ಸಂತರಿಂ ಪೂಜಿತವು ಸಚ್ಚಿದಾನಂದವೂ ॥

ವ್ಯಾಸ ರಾಮಾನುಜರು ಸಂತ ಶ್ರೀ ಪುರಂದರರು ।
ಶ್ರೀಶನಾ ಭಕ್ತರು ಅಗಣಿತರು ಪೂಜಿಸಲು ॥
ಏನು ಭವ್ಯಾಕಾರ । ಏನು ಭೀಮಾಕಾರವೋ ।
ಜ್ಞಾನನಿಧಿ ಶ್ರೀವಾದಿರಾಜರಿಂದರ್ಚಿತವೂ ॥

ಮಹತೋಮಹೀಯನೂ ಈ ಮೇರು ದಂಡದಲಿ ।
ಸಹಜ ಗುಣದಿಂ ಸಪ್ತಚಕ್ರದಳ ಮಧ್ಯದಲಿ ॥
ಹೃದಯ ಗಿರಿ ಗಹ್ವರದಿ ಈ ಬ್ರಹ್ಮವನದಲ್ಲಿ ।
ಸದಯ ರುಕ್ಮಿಣಿ ವರದಾ ನೆಲೆಸಿಹನು ನೋಡಿಲ್ಲಿ ॥

ಶ್ರೀಮತಿ ರುಕ್ಮಿಣೀ ಗಿರಿಮಾಜಿ.

( 8 ನೇ ಪುಟದಿಂದ )

ಗಳು, ಪಾನೀಯಗಳು ಉದರಕ್ಕೆ ಸಂಬಂಧಪಟ್ಟ ರೋಗಗಳು ಹೆಚ್ಚಲು ಕಾರಣವಾಗಿದೆ. ಬೆರಕೆಯ ಪದಾರ್ಥಗಳ ಕಥೆಯೇ ಬೇರೊಂದು ಕೃತಿಯಾಗುತ್ತದೆ.

ನಕಲಿ ಔಷಧಗಳು, ವೇದನಾ ಶಾಮಕಗಳು, ಅತ್ಯಂತ ಹೆಚ್ಚಿನ ಅಪಾಯಕಾರಿಗಳಾಗಿವೆ. ವೇದನಾ ಶಾಮಕಗಳು, ಹೊಸ ಹೊಸ ರೋಗಗಳನ್ನು ಉಂಟುಮಾಡುತ್ತಿವೆ. ಹೃದಯ, ಮತ್ತು ಮಸ್ತಿಷ್ಕಕ್ಕೆ ಹಾನಿಯನ್ನುಂಟುಮಾಡುತ್ತಿದೆ. ರೋಗಗಳನ್ನು ಎದುರಿಸುವ ಶಕ್ತಿಯನ್ನು ಕಡಮೆ ಮಾಡುತ್ತಿದೆ.

ಸದ್ದುಗದ್ದಲದ ಜೀವನ, ಕಾರ್ಖಾನೆಗಳು, ಗಿರಣಿಗಳು ಹಾಗೂ ವಾಹನಗಳ ಸಂಚಾರದಿಂದ ಉಂಟಾಗುವ ನಿರಂತರವಾದ ಕಿವಿಗಳಿಗೆ ಅಹಿತಕರವಾದ ಶಬ್ದಗಳು ಹೃದಯ ರೋಗಗಳು ಹೆಚ್ಚಲು ಕಾರಣವಾಗಿದೆ. ಇದರಿಂದ ಕಿವಿಗೆ ಸಂಬಂಧಪಟ್ಟ ತೊಂದರೆಗಳು ಹೆಚ್ಚುತ್ತಿರುವುದಾಗಿ ಕಂಡುಬಂದಿದೆ.

ಕಛೇರಿಗಳಲ್ಲಿ ಅನೇಕ ಗಂಟೆಗಳು ಕುಳಿತೇ ಕೆಲಸ ಮಾಡುವುದು, ಕ್ರಮಬದ್ಧವಾಗಿ ಊಟ, ತಿಂಡಿ ಮಾಡಲಾಗದಿರುವುದು, ಸಿಕ್ಕಿದ ಆಹಾರವನ್ನು ತಿನ್ನುವುದು – ಅಜೀರ್ಣ ಮೊದಲಾದ ರೋಗಗಳಿಗೆ ಎಡೆಮಾಡಿದೆ.

ಕಾಫಿ, ಟೀ ಮುಂತಾದ ವಿಷಯುಕ್ತ ಪಾನೀಯಗಳು ಬಹುಮಟ್ಟಿಗೆ ಆರೋಗ್ಯವನ್ನು ಹಾಳುಮಾಡಲು ಕಾರಣವಾಗಿದೆ. ಹೊಗೆಸೊಪ್ಪಿನಿಂದಲೂ ಶ್ವಾಸಕೋಶಗಳು ಕರಿಗಟ್ಟುತ್ತಿವೆ.

ಅಶ್ಲೀಲವಾದ ಸಾಹಿತ್ಯ, ಮಾನಸಿಕ ಶಾಂತಿಯನ್ನು ಕಲಕುವ ಸಿನಿಮಾಗಳು ಮಾನಸಿಕ ಆರೋಗ್ಯ ಕೆಡಲು ಕಾರಣಗಳಾಗಿವೆ.

ಹೊಟೆಲ್‌ಗಳು, ಬಾರ್‌ಗಳು, ಕ್ಲಬ್‌ಗಳು ವ್ಯಕ್ತಿಯ ದೈಹಿಕ ಆರೋಗ್ಯಕ್ಕೆ ಧಕ್ಕೆಯನ್ನುಂಟುಮಾಡುವುದರ ಜೊತೆಗೆ, ಮಾನಸಿಕ ಶಾಂತಿಯನ್ನು ಹಾಳುಮಾಡುತ್ತಿವೆ. ಇಲ್ಲದೆ ವ್ಯಕ್ತಿಯ ಸಂಯಮವನ್ನು ಸಡಿಲಗೊಳಿಸುತ್ತಿವೆ. ಇವರಿಂದ ಭಯಂಕರವಾದ ಲೈಂಗಿಕ ವ್ಯಾಧಿಗಳು ಹರಡಲು ಕಾರಣವಾಗಿದೆ.

ಪೇಟೆಯಲ್ಲಿ ಬರುತ್ತಿರುವ ಅಲಂಕರಣ ಸಾಧನಗಳು ಸೌಂದರ್ಯವನ್ನು ಹೆಚ್ಚಿಸುವಲ್ಲಿ ತಾತ್ಕಾಲಿಕವಾಗಿ ಮಾತ್ರ ಸಹಕರಿಸುತ್ತವೆ, ಪಾತ್ರ ವಹಿಸುತ್ತವೆ.

ಇಂತಹ ಪರಿಸ್ಥಿತಿಯಲ್ಲಿ ಯೋಗಾಭ್ಯಾಸವು ಪುರುಷನಷ್ಟೇ ಮಹಿಳೆಗೂ ಅವಶ್ಯಕವಾಗಿದೆ. ಸ್ತ್ರೀಯರ ಶರೀರದ ರಚನೆ ಹಾಗೂ ಕ್ರಿಯೆ ; ಪುರುಷರ ಶರೀರದ ರಚನೆ ಹಾಗೂ ಕ್ರಿಯೆಯಿಂದ ಬೇರೆಯಾಗಿದೆ. ಸ್ತ್ರೀಯ ದೇಹದಲ್ಲಿ ಉತ್ಪತ್ತಿಯಾಗುವ ಅಂಡಾಶಯದ ಹಾರ್ಮೋನುಗಳು, ಆಕ್ಸಿಟೋಸಿನ್ ಹಾರ್ಮೋನುಗಳು, ಪ್ರೊಲಾಕ್ಟಿನ್, ಇವು ಮಹತ್ವದ ಪಾತ್ರ ವಹಿಸುತ್ತವೆ.

ಸ್ತ್ರೀಯರ ದೇಹ ಬಹಳ ಕೋಮಲವಾದುದು. ಶ್ರಮಸಾಧ್ಯವಾದ ಇತರ ಕಠಿಣ ವ್ಯಾಯಾಮಗಳು, ಬಯಲಿನಲ್ಲಿ ಆಡುವ ಆಟಗಳು, ಸೈಕಲ್ ಸವಾರಿ, ಅವಳ ದೇಹ ರಚನೆಗೆ ಹೊಂದಲಾರದು. ಇವು ಅವಳ ದೇಹವನ್ನು ಒರಟು ಮಾಡುತ್ತವೆ. ಯೋಗಾಸನಗಳು ಸ್ತ್ರೀಯರಿಗೆ ಸುಲಭಸಾಧ್ಯವಾದ ವ್ಯಾಯಾಮವಾಗಿದೆ. ಸ್ತ್ರೀಯರಿಗಾಗಿಯೇ ಹೇಳಿಮಾಡಿಸಿದಂತಿವೆ.

ಸ್ತ್ರೀಯರು ನಾಚಿಕೆ ಸ್ವಭಾವದವರು. ಬಯಲಿನಲ್ಲಿ ವ್ಯಾಯಾಮಮಾಡಲು ಹಿಂಜಯುತ್ತಾರೆ. ಎಲ್ಲ ಸ್ತ್ರೀಯಯರೂ ಸಂಜೆಯ ವೇಳೆ ಕ್ಲಬ್, ಸಮಾಜಗಳಿಗೆ ಹೋಗಲು ಬಿಡುವಿರುವುದಿಲ್ಲ. ಶುದ್ಧವಾದ ಗಾಳಿಯಲ್ಲಿ ಸ್ವಲ್ಪ ದೂರ ಹೋಗಲು ಕೂಡ ಅವರಿಗೆ ಆಗುವುದಿಲ್ಲ. ಆದ್ದರಿಂದ ಯೋಗಾಭ್ಯಾಸವನ್ನು ಅವರು ತಮ್ಮ ಮನೆಯಲ್ಲಿನ ಒಂದು ಕೋಣೆಯಲ್ಲಿಯೇ ಮಾಡಿಕೊಳ್ಳಬಹುದು. ಇದಕ್ಕೆ ಬೇಕಾದದ್ದು ಕೇವಲ ಒಂದು ಜಮಖಾನ ಅಥವಾ ಚಾಪೆ ಅಥವಾ ಬೆಡ್‌ಶೀಟ್ ಇಲ್ಲವೆ ಹಾಸುಗಂಬಳಿ.

ಇತರ ವ್ಯಾಯಾಮಗಳಿಂದ ದೇಹದ ಕೆಲವೇ ಅಂಗಗಳಿಗೆ ವ್ಯಾಯಾಮ ದೊರೆಯುತ್ತದೆ. ಆದರೆ ಯೋಗಾಭ್ಯಾಸದಲ್ಲಿ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಶರೀರದಲ್ಲಿರುವ ಪ್ರತಿಯೊಂದು ಭಾಗಕ್ಕೂ ವಿಶೇಷ ಪ್ರಾಮುಖ್ಯತೆಯತೆಯನ್ನು ಕೊಡಲಾಗಿದೆ. ಆಸನಗಳನ್ನು ಅಭ್ಯಾಸ ಮಾಡುವುದರಿಂದ ಬೆನ್ನು ಮೂಳೆಗೆ (vertebral column) ಹೊಟ್ಟೆಯಲ್ಲಿರುವ ಪ್ರತಿಯೊಂದು ಭಾಗಕ್ಕೂ ವ್ಯಾಯಾಮವಾಗುತ್ತದೆ. ಇದು ಯೋಗಾಸನದ ವಿಶೇಷತೆ. ಅಲ್ಲದೆ ನಿರ್ನಾಳಗ್ರಂಥಿಗಳ ಮೇಲೆ ಪರಿಣಾಮ ಬೀರುವ ಯೋಗಾಸನಗಳು ಶರೀರದ ಆರೋಗ್ಯವನ್ನೂ, ಮಾನಸಿಕ ಸಮತೋಲನವನ್ನೂ ಕಾಪಾಡಿಕೊಳ್ಳಲು ಸಹಕಾರಿಯಾಗಿವೆ.

ಸ್ತ್ರೀಯರ ಕಿಬ್ಬೊಟ್ಟೆಯಲ್ಲಿರುವ ಅಂಡಾಶಯಗಳಿಂದಾಗಿ ಹೆಣ್ಣುಮಕ್ಕಳಲ್ಲಿ ಸುಮಾರು ಹನ್ನೆರಡುವರ್ಷಗಳನಂತರ ಮುಟ್ಟುಆರಂಭವಾಗುತ್ತದೆ. ಈ ಕಾಲದಲ್ಲಿ ತರುಣಿಯ ರೂಪುರೇಷೆಗಳು, ದೇಹದ ಮಾಟ ರೂಪಿತವಾಗುತ್ತದೆ. ಅವರಲ್ಲಿ ದೈಹಿಕ ಬದಲಾವಣೆಯ ಜೊತೆಗೇ ಮಾನಸಿಕ ಬದಲಾವಣೆಯೂ ಉಂಟಾಗುತ್ತದೆ. ಬಾಲ್ಯದಿಂದ ತಾರುಣ್ಯಕ್ಕೆ ಕಾಲಿಡುವ, ದೈಹಿಕ ಹಾಗೂ ಮಾನಸಿಕ ಬದಲಾವಣೆಯಾಗುವ ಈ ಅವಧಿಯಲ್ಲಿ ಹೆಣ್ಣುಮಕ್ಕಳು ಮಾನಸಿಕ ಘರ್ಷಣೆಗೆ ಒಳಗಾಗುತ್ತಾರೆ. ಇದು ಎಷ್ಟು ಬಲವತ್ತರವಾದುದೆಂದರೆ ಕೆಲವು ಹೆಣ್ಣುಮಕ್ಕಳಲ್ಲಿ ದೈಹಿಕವಾಗಿ ಆರೋಗ್ಯ ಕೆಡಲು ಕಾರಣವಾಗುತ್ತದೆ. ಕೆಲವು ಹೆಣ್ಣು ಮಕ್ಕಳಲ್ಲಿ ದೇಹದ ಬೆಳವಣಿಗೆ ಕುಂಠಿತವಾಗುತ್ತದೆ. ಈ ವಯಸ್ಸಿನಲ್ಲಿ ಹೆಣ್ಣುಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಸಾವಿಗೆ ಈಡಾಗುವುದಾಗಿ ಸಂಶೋಧನೆಯಿಂದ ತಿಳಿದು ಬಂದಿದೆ.

ಮೇಲೆ ಹೇಳಿದ ಕಾರಣಗಳಿಂದ. ತಾರುಣ್ಯದಲ್ಲಿ ಕಾಲಿಡುವ ಹೆಣ್ಣುಮಕ್ಕಳ ಬಗ್ಗೆ ಹೆಚ್ಚಿನ ಜವಾಬ್ದಾರಿ ತೆಗೆದುಕೊಳ್ಳುವುದು ಅತ್ಯಾವಶ್ಯಕ. ಈ ಅವಧಿಯಲ್ಲಿ ಸಮತೋಲ ಆಹಾರ, ದೈಹಿಕ ಮತ್ತು ಮಾನಸಿಕವಾದಂಥ ಆಯಾಸ ಕಡಮೆಗೊಳಿಸಬೇಕು.

ಯೋಗಾಸನಗಳು ಈ ವಯಸ್ಸಿನ ಹೆಣ್ಣುಮಕ್ಕಳು ಅಭ್ಯಾಸ ಮಾಡಲು ತಕ್ಕ ವ್ಯಾಯಾಮವಾಗಿದೆ.ವೈಜ್ಞಾನಿಕ ಆಧಾರದ ಮೇಲೆ ರೂಪಿತವಾಗಿರುವ ಯೋಗಾಸನಗಳು ನಿರ್ನಾಳ ಗ್ರಂಥಿಗಳ ಮೇಲೆ ಪ್ರಭಾವ ಬೀರಿ ಅವು ಸಮರ್ಪಕವಾಗಿ ಕೆಲಸಮಾಡುವಂತೆ ಮಾಡುತ್ತದೆ. ಮಾಸಿಕ ಚಕ್ರ ಕ್ರಮವಾಗುತ್ತದೆ. ನ್ಯೂನತೆಗಳು ನಿವಾರಣೆಯಾಗುತ್ತದೆ. ಅಂಡಾಶಯಗಳು ಆರೋಗ್ಯಕರವಾದ ಬೆಳವಣಿಗೆ ಹೊಂದಲು ಕಾರಣವಾಗುತ್ತದೆ. ಕ್ರಮವಾಗಿ ಅಭ್ಯಾಸಮಾಡುವುದರಿಂದ ಅವಳನ್ನು ವೈವಾಹಿಕ ಜೀವನಕ್ಕೆ ಸಮರ್ಥಳನ್ನಾಗಿ ಮಾಡುತ್ತದೆ.

ಗರ್ಭಿಣಿಯಾದ ಸ್ತ್ರೀ ಮೊದಲ ಮೂರು ತಿಂಗಳುಗಳ ಕಾಲ ಯೋಗಾಸನಗಳನ್ನು ಅಭ್ಯಾಸ ಮಾಡಿದಲ್ಲಿ, ಗರ್ಭಕೋಶಕ್ಕೆ ಸಂಬಂಧಪಟ್ಟ ಸ್ನಾಯುಗಳು ಸಬಲಗೊಳ್ಳುತ್ತವೆ- ಗರ್ಭವು ಸ್ಥಿರವಾಗುತ್ತದೆ. ಪದೇಪದೇ ಗರ್ಭಸ್ರಾವವಾಗುವ ಭಯವುಳ್ಳ ಸ್ತ್ರೀಯರು ಮೊದಲು ಮೂರು ತಿಂಗಳ ಪರ್ಯಂತರ ಆಸನಾಭ್ಯಾಸವನ್ನು ಮಾಡಿದಲ್ಲಿ ಗರ್ಭಸ್ಥಿರವಾಗಿ ನಿಂತು, ಸುಖಪ್ರಸವವಾಗುತ್ತದೆ. ಪ್ರಾಣಾಯಾಮ ಮಾಡುವಾಗ ಪದ್ಮಾಸನದಲ್ಲಿ ಕುಳಿತು ಕೇವಲ ದೀರ್ಘವಾದ ರೇಚಕ, ಪೂರಕಗಳನ್ನು ಮಾತ್ರ ಮಾಡಬೇಕು. ಕುಂಭಕವನ್ನು ಖಂಡಿತಾ ಮಾಡಕೂಡದು. ನುರಿತ, ಅನುಭವಿ ಶಿಕ್ಷಕರಲ್ಲಿ ಅಭ್ಯಾಸಮಾಡಬೇಕು.

ಪ್ರಸವವಾದ ಒಂದು ತಿಂಗಳನಂತರ ಅಭ್ಯಾಸ ಮಾಡಿದಲ್ಲಿ ಪ್ರಸವಕಾಲದಲ್ಲಿ ಸಡಿಲವಾದ ಗರ್ಭಕೋಶದ ಸ್ನಾಯುಗಳು, ಗರ್ಭಕೋಶ ಜನನೇಂದ್ರಿಯ - ಇವು ಸಂಕುಚಿತಗೊಂಡು, ಸಬಲವಾಗುವುವು. ಅಭ್ಯಾಸವನ್ನು ಕ್ರಮ ಕ್ರಮವಾಗಿ ನಿಧಾನ ಮಾಡಬೇಕು.

ಸುಮಾರು ನಲವತ್ತೈದರಿಂದ ಐವತ್ತು ವರ್ಷಗಳ ನಂತರ ಸ್ತ್ರೀಯರಿಗೆ ಮಾಸಿಕ ಚಕ್ರವು ನಿಲ್ಲುವ ಕಾಲ. ಈ ಕಾಲದಲ್ಲಿ ಸ್ತ್ರೀಯರು ಮಾನಸಿಕ ಉದ್ವೇಗಕ್ಕೆ ಒಳಗಾಗುತ್ತಾರೆ. ರಕ್ತದ ಒತ್ತಡ, ಮಧುಮೇಹ ಹೃದಯರೋಗಗಳು. ಅವರಿಗೆ ಉಂಟಾಗುವ ಸಂಭವ ಹೆಚ್ಚಾಗಿರುತ್ತದೆ. ಆದ ಕಾರಣ ಐವತ್ತು ವರ್ಷ ಮೀರಿದ ಸ್ತ್ರೀಯರೂ ಸಹ ಕೆಲವಾರು ಆಸನ, ಪ್ರಾಣಾಯಾಮಗಳನ್ನು ಮಾಡಿದಲ್ಲಿ, ಅವರು ತಮ್ಮ ದೇಹಾರೋಗ್ಯ ಮತ್ತು ಮಾನಸಿಕ ಆರೋಗ್ಯವನ್ನು ಕಾಪಾಡಿಕೊಳ್ಳಬಹುದು. ಶಾಂತಿಯಿಂದ ಕೂಡಿದ ಅವರ ಮನಸ್ಸು ಸಹಜವಾಗಿ ಆಧ್ಯಾತ್ಮದ ಕಡೆಗೆ ಒಲಿಯುತ್ತದೆ. ಬದುಕು ಆನಂದಮಯವಾಗುತ್ತದೆ.

ಪುರುಷರಿಗಿಂತ ಸ್ತ್ರೀಯರ ಶರೀರದಲ್ಲಿ ಜಾಗ್ರತೆಯಾಗಿ ಕೊಬ್ಬು ಶೇಖರವಾಗುವ ಸಂಭವ ಹೆಚ್ಚು. ಸ್ತ್ರೀಯರು ಒಂದು ಅಥವಾ ಎರಡು ಮಕ್ಕಳಾದ ನಂತರ, ಮಧ್ಯವಯಸ್ಸು ದಾಟಿದ ನಂತರ ಸ್ಥೂಲಕಾಯರಾಗುತ್ತಾರೆ. ಕಿಬ್ಬೊಟ್ಟೆಯಲ್ಲಿ ಅನವಶ್ಯಕವಾದ ಕೊಬ್ಬು ಸೇರದಂತೆ ಸದಾ ಎಚ್ಚರಿಕೆ ವಹಿಸುವುದು ಅಗತ್ಯ. ಹೆಚ್ಚಿನ ತೂಕದ ಪರಿಣಾಮ ಅವಳು ಚಟುವಟಿಕೆಯಿಂದ ಕೆಲಸ ಮಾಡಲು ಆಗುವುದಿಲ್ಲ. ಏಳುವುದು ಕೂರುವುದು ಸಹ ಅವಳಿಗೆ ಕಷ್ಟವಾಗುತ್ತದೆ. ಹೆಚ್ಚಿನ ತೂಕದ ಕಾರಣ ರಕ್ತದ ಒತ್ತಡ, ಹೃದಯರೋಗಗಳು, ವೆರಿಕೋಸ್ ವೆಯಿನ್ಸ್, ಸಯಾಟಿಕಾ, ಉಬ್ಬಸ, ವಾಯುಬೇನೆ ಮೊದಲಾದ ಒಂದಲ್ಲ ಒಂದು ವ್ಯಾಧಿ ಅವಳಲ್ಲಿ ಕಾಣಿಸಿಕೊಳ್ಳುತ್ತವೆ.

ಎಲ್ಲಾ ವಿಧವಾದ ಜವಾಬ್ದಾರಿಯನ್ನು ಪೂರಯಿಸಿ ನಿಶ್ಚಿಂತ ಜೀವನ ನಡೆಸಬೇಕಾದ ಜೀವನದ ಸಂಧ್ಯಾಕಾಲದಲ್ಲಿ ಅನೇಕ ವಿಧವಾದ ದೈಹಿಕ ಅನಾರೋಗ್ಯದ ಕಾರಣ, ಮಾನಸಿಕ ನೆಮ್ಮದಿ ಇಲ್ಲದಂತಾಗುತ್ತದೆ. ಇಂದು ಕಂಡುಬರುತ್ತಿರುವ ಬಹುಮಂದಿ ಸ್ತ್ರೀಯರ ಚಿತ್ರ ಇದು. ಈ ಎಲ್ಲ ಕಷ್ಟ, ಕಾರ್ಪಣ್ಯದಿಂದ ಬಿಡುಗಡೆ ಹೊಂದಲು ಯೋಗಮಾರ್ಗವು ರಾಜಮಾರ್ಗವಾಗಿದೆ. ಇಹ, ಪರ ಎರಡಕ್ಕೂ ಸಾಧನವಾಗುತ್ತದೆ. ಯೋಗವನ್ನು ಅಭ್ಯಾಸ ಮಾಡಲು ವಯಸ್ಸಿನ, ಜಾತಿಯ, ದೇಶದ, ಕಾಲದ ಅಂತರವಿಲ್ಲ. ಅವರವರ ದೇಹಶಕ್ತಿಗೆ ತಕ್ಕಂತೆ, ನುರಿತ, ಅನುಭವಿ ಶಿಕ್ಷಕರಲ್ಲಿ ಅಭ್ಯಾಸ ಮಾಡಬೇಕು-



# ನಿಮ್ಮ ಭವಿಷ್ಯ

1—10—81 ರಿಂದ
31—10—81 ವರೆಗೆ

ಡಾ॥ ಅರ್ಕಸೋಮಯಾಜಿ.

## ಮೇಷ :

ಈ ತಿಂಗಳನಲ್ಲಿ ಈ ರಾಶಿಯವರು ಸುಖ ಪಡುವರು. 17ರವರೆಗೆ ತುಸು ವಿವಾದವೂ ನಂತರ ಆಪ್ತರಿಂದ ಬೇರ್ಪಡೆಯೂ ಇರಬಹುದು. 10ರನಂತರ ಮಕ್ಕಳೊಂದಿಗೆ ತಗಾದೆ ಅಥವಾ ತುಸು ಅನಾರೋಗ್ಯ. ಏನೇ ಆದರೂ ಧನಲಾಭ, ವಸ್ತ್ರಲಾಭ, ಪ್ರಣಯಭಾವ. 17 ರನಂತರ ಪ್ರಯಾಣ ಅಥವಾ ಹೊಟ್ಟೆ ನೋವು ಸೂಚಿತವಾಗಿದೆ.

ಅಶ್ವಿನಿಯವರಿಗೆ, ಕೃತ್ತಿಕೆ 1ನೇಪಾದದವರಿಗೆ 1, 8, 14, 19, 26,

ಭರಣಿಯವರಿಗೆ 2, 7, 9 ರಮಧ್ಯಾಹ್ನ, 11, 14, 25, 77 ಒಳಿತಿನ ದಿನಗಳು.

## ವೃಷಭ :

ಸ್ತ್ರೀಯರು ತೊಂದರೆ ನೀಡಲು ಯತ್ನಿಸುವರು. ಅಪಮಾರ್ಗದಲ್ಲಿ ಅಥವಾ ಪುತ್ರರ ಮೂಲಕ ಧನಲಾಭ. 10 ರನಂತರ ತುಸು ಹೊಟ್ಟೆ ನೋವು ಅಥವಾ ಇತರತ್ರ ಅನಾರೋಗ್ಯ, ಯಶಸ್ಸು. 19 ರನಂತರ ಹೆಂಡತಿ ಅಥವಾ ಪುತ್ರರೊಂದಿಗೆ ವಿವಾದ. ಮಕ್ಕಳಿಂದಾಗಿ ತುಸು ಚಿಂತೆ. 17 ರನಂತರ ಧನ ಲಾಭ.

ಕೃತ್ತಿಕೆ 2, 3, 4ನೇ ಪಾ ದ ದ ವ ರಿ ಗೆ, ಮೃಗಶಿರ 1, 2, ಪಾದದವರಿಗೆ 1, 2, 13, 10, 12, 17,

ರೋಹಿಣಿ ಯವರಿಗೆ 2, 9 ರಮಧ್ಯಾಹ್ನ 11, 13, ಒಳಿತಿನ ದಿನಗಳು.

## ಮಿಥುನ :

10 ರ ಮೊದಲು ಅನಗತ್ಯ ವೆಚ್ಚ ಅಥವಾ ಕಳ್ಳತನ ಅಥವಾ ಅಧಿಕೃತ ಚಿಂತೆ ಸೂಚಿತವಾಗಿದೆ. ತುಸು ಅನಾರೋಗ್ಯ. 17 ರ ಮೊದಲು ಹೆಂಡತಿ ಮಕ್ಕಳೊಡನೆ ವಿವಾದ ನಂತರ ಧನಲಾಭ, ಆಪ್ತರೊಡನೆ ಬೇರ್ಪಡೆ, ಅಥವಾ ಸ್ತ್ರೀಯರ ಮೂಲಕ ತೊಂದರೆ.

ಮೃಗಶಿರ 3, 4 ಪಾದದವರಿಗೆ,ಪುನರ್ವಸು 1, 2, 3 ಪಾದದವರಿಗೆ 3, 5, 12, 14, 19,

ಆರ್ದ್ರಾದವರಿಗೆ 6, 13, 18, 20, 23, ಒಳಿತಿನ ದಿನಗಳು.

## ಕರ್ಕಾಟಕ :

ಧನಲಾಭ ಆದರೆ 10 ರ ನಂತರ ತುಸು ವಿವಾದ ಅಥವಾ ಅನಾರೋಗ್ಯ ಅಥವಾ ಚೋರಭಯವಿರಬಹುದು. ವಸ್ತ್ರಲಾಭ ವುಂಟು. ಬಂಧುಗಳ ಆಗಮನ, ಹಿರಿಯರ ಪ್ರಶಂಸೆ, ಹೊಸಸ್ನೇಹ, ಗೃಹ ಸಂಪದಭಿವೃದ್ಧಿ. ಕೆಟ್ಟ ಜನರು ತೊಂದರೆಯನ್ನುಂಟು ಮಾಡಲು ಪ್ರಯತ್ನಿಸುವರು. ಆಗಾಗ ಪ್ರಯಾಣ ಸೂಚಿತವಾಗಿದೆ.

ಪುನರ್ವಸು 4 ನೇಪಾದದವರಿಗೆ 5, 7, 9, 14, 21,

ಪುಷ್ಯಮಿಯವರಿಗೆ 1, 8, 17, 26,

ಅರಿಷ್ಟಾ ನಕ್ಷತ್ರದವರಿಗೆ 14, 21, 25, ಒಳಿತಿನ ದಿನಗಳು.

## ಸಿಂಹ :

17 ರವರೆಗೆ ಅಧಿಕವೆಚ್ಚ ಅಥವಾ ಧನನಷ್ಟ ಸೂಚಿತವಾಗಿದೆ. ವಂಚನೆಗೆ ಒಳಗಾಗುವಿಕೆ ಅಥವಾ ಕಣ್ಣುನೋವು ಸಂಭವವಿದೆ. ಹೊಸ ಸ್ನೇಹ. 19 ರವರೆಗೆ ದುಷ್ಪ್ರವರ್ತನೆ. 10 ರ ನಂತರ ಹೆಂಡತಿಯೊಡನೆ ವಿವಾದ.

ಮಖಾ ನಕ್ಷತ್ರದವರಿಗೆ 1, 9, 10, 17, 24

ಪುಬ್ಬಾ ದ ವ ರಿ ಗೆ 2, 9, 18, 24 ರ ಮಧ್ಯಾಹ್ನ, 27

ಉತ್ತರಾ 1ನೇಪಾದದವರಿಗೆ 1, 8, 10 17, 23, 24,

ಒಳಿತಿನ ದಿನಗಳು.

## ಕನ್ಯಾ :

ಪ್ರಯಾಣ ಹಾಗೂ ಪ್ರಯಾಸ ಸೂಚಿತವಾಗಿದೆ. ಧನಲಾಭವಿದ್ದರೂ ಹೆಚ್ಚು ವ್ಯಯ. ಪುತ್ರರೊಡನೆ ವಿವಾದ ಅಥವಾ ಆಪ್ತರಿಂದ

( 40ನೇ ಪುಟ ನೋಡಿ )



ತಿರುಪತಿಯಲ್ಲಿ ತಿ. ತಿ. ದೇ. ಗಳು ಈಚೆಗೆ ಆರಂಭಿಸಿದ ಕೃತಕ ಅವಯವಕೇಂದ್ರದ ಉದ್ಘಾಟನಾ ಸಮಾರಂಭದ ಸಮಯದಲ್ಲಿ ತೆಗೆದ ಚಿತ್ರ.

# ಕರ್ನಾಟಕದಲ್ಲಿ

## ಪುಸ್ತಕ ಪ್ರಕಟನೆ

### ನಿವೇದನೆ

ಬೆಂಗಳೂರಿನ ಶ್ರೀನಗರದ ಪರಿಮಳ ಗೆಳೆಯರ ಬಳಗದಲ್ಲಿ ದಿನಾಂಕ 9–8–81 ರಂದು ಜಯಸಿಂಹ ಅವರು ಬರೆದ ‘ನಿವೇದನೆ’ ಪುಸ್ತಕವನ್ನು ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು ಬಿಡುಗಡೆ ಮಾಡಿದರು.

ಸುಬ್ರಹ್ಮಣ್ಯದ ಮಠಾಧೀಶ ಶ್ರೀವಿದ್ಯಾಭೂಷಣ ತೀರ್ಥರು ಹಾಗೂ ಪೇಜಾವರ ಮಠದ ಕಿರಿಯ ಶ್ರೀಗಳಾದ ಶ್ರೀ ವಿಶ್ವವಿಜಯತೀರ್ಥರೂ ಉಪಸ್ಥಿತರಿದ್ದ ಈ ಕಾರ್ಯಕ್ರಮದಲ್ಲಿ ಶ್ರೀ ಶ್ರೀ ವಿಶ್ವೇಶತೀರ್ಥರು ಪುಸ್ತಕದ ಬಗ್ಗೆ ಮಾತನಾಡುತ್ತ ‘ಇಲ್ಲಿ ಭಕ್ತಿಯ ಅಭಿವ್ಯಕ್ತಿ ಚೆನ್ನಾಗಿ ಆಗಿದೆ’ ಎಂದು ನುಡಿದರು,

ತಿ. ತಿ. ದೇವಸ್ಥಾನಗಳ ಆರ್ಥಿಕ ನೆರವಿನಿಂದ ಪ್ರಕಟವಾದ ‘ನಿವೇದನೆ’ಯ ಲೇಖಕ ಜಯಸಿಂಹ ಅವರು ದೇವಸ್ಥಾನಗಳಿಗೆ ಕೃತಜ್ಞತೆಗಳನ್ನರ್ಪಿಸಿದರು.

### ಮಹಾಭಾರತ

ಬೆಂಗಳೂರಿನ ಭಾರತ ದರ್ಶನ ಪ್ರಕಾಶನದವರು ಪ್ರಕಟಿಸುತ್ತಿರುವ ವ್ಯಾಸಭಾರತದ ಕನ್ನಡಾವತರಣಿಕೆಯ 22 ನೆಯ ಸಂಪುಟವನ್ನು ಈಚೆಗೆ ನ್ಯಾಯಮೂರ್ತಿ ಶ್ರೀ ಜಿ.ಎಸ್. ಸಭಾಹಿತ ಅವರ ಅಧ್ಯಕ್ಷತೆಯಲ್ಲಿ, ತಿ.ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ಬಿಡುಗಡೆ ಮಾಡಿದರು.

ಬಿಡುಗಡೆಯಲ್ಲಿ ಮಾತನಾಡುತ್ತ ಪಿ.ವಿ.ಆರ್. ಪ್ರಸಾದರು ರಾಮಾಯಣ ಮಹಾಭಾರತಗಳು ಭಾರತೀಯ ಸಂಸ್ಕೃತಿಯ ಆಧಾರಸ್ತಂಭಗಳಿದ್ದಂತೆ ಎಂದೂ, ಅವುಗಳ ಅಧ್ಯಯನ ಪ್ರತಿಯೊಬ್ಬ ಭಾರತೀಯನ ಕರ್ತವ್ಯವಾಗಬೇಕೆಂದೂ ಹೇಳುತ್ತ ಭಾರತದರ್ಶನ ಪ್ರಕಾಶನ ಸಂಸ್ಥೆ ಈ ದಿಸೆಯಲ್ಲಿ ಕನ್ನಡಿಗರಿಗೆ ಮಹಾಭಾರತದ ಪುಸ್ತಕ ಮುಟ್ಟಿಸುವ ಸ್ತುತ್ಯ ಕೆಲಸದಲ್ಲಿ ತೊಡಗಿರುವುದು ಆನಂದದಾಯಕವೆಂದೂ, ಈ ಕೆಲಸದಲ್ಲಿ ತಿ. ತಿ. ದೇವಸ್ಥಾನಗಳು ಸೂಕ್ತ ನೆರವನ್ನು ನೀಡುವುದಾಗಿಯೂ ಭರವಸೆ ನೀಡಿದರು. ಅಧ್ಯಕ್ಷರು ಮಾತನಾಡುತ್ತ ಇತರೆಲ್ಲ ಅಭಿಮಾನಿ ಸಂಘ ಸಂಸ್ಥೆಗಳಂತೆ ರಾಮಾಯಣ, ಮಹಾಭಾರತ ಸಂಘಗಳಾಗಿ ಆಗಿ ಅವುಗಳ ಅಧ್ಯಯನ ವ್ಯಾಪಕವಾಗಿ, ವೈಜ್ಞಾನಿಕವಾಗಿ ನಡೆಯಬೇಕೆಂದು ಕರೆ ನೀಡಿದರು.

22ನೆಯ ಸಂಪುಟವಾದ ಶಾಂತಿಪರ್ವದ ಪರಿಚಯವನ್ನು ಭಾರತದರ್ಶನ ಪ್ರಕಾಶನ ಸಂಸ್ಥೆಯ ಅಧ್ಯಕ್ಷ ಎಚ್. ಎಸ್. ವರದ ದೇಶಿಕಾಚಾರ್ಯ ರಂಗಪ್ರಿಯರು ಮಾಡಿಕೊಟ್ಟರು.

ವಿದ್ವಾನ್ ರಂಗಸ್ವಾಮಿಯವರು ಸ್ವಾಗತಿಸಿದ ಸಭೆಯನ್ನು ವಿದ್ವಾನ್ ರಾಮೇಶ್ವರರಾವಧಾನಿಗಳು ವಂದಿಸಿದರು. ಸಭೆಯನ್ನು ಕೇಶವ ಸುಬ್ರಹ್ಮಣ್ಯ ಕೌಶಿಕರು ಸಂಯೋಜಿಸಿದ್ದರು.

ಮಹಾಭಾರತದ 22 ನೆಯ ಕನ್ನಡ ಸಂಪುಟವನ್ನು ಬಿಡುಗಡೆ ಮಾಡಿದ ಸಂದರ್ಭದಲ್ಲಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್ ಮಾತನಾಡುತ್ತಿರುವಿಕೆ.




## ರಾಘವೇಂದ್ರಸ್ವಾಮಿ ಆರಾಧನೆ

ಹೊಸರಿತ್ತಿಯ ಶ್ರೀ ಧೀರೇಂದ್ರತೀರ್ಥರ ಸನ್ನಿಧಿಯಲ್ಲಿ ಗುರುಸಾರ್ವಭೌಮ ಶ್ರೀ ರಾಘವೇಂದ್ರ ಸ್ವಾಮಿಗಳ ಆರಾಧನೆ ಕಳೆದ ಆಗಸ್ಟ್ 16, 17, 18 ರಂದು ವಿಜೃಂಭಣೆಯಿಂದ ನೆರವೇರಿತು.

ದಿನಾಂಕ 16ರ ರಂದು ಎಂ. ಬಿ. ಜಿ. ಅಧ್ಯಾಪಕರಿಂದ ‘ಶ್ರೀ ರಾಘವೇಂದ್ರ ವಿಜಯ’ದ ವಿವರಣೆ, 17ರ ರಂದು ಕೆ. ಎಚ್. ಧೀರೇಂದ್ರಾಚಾರ್ಯ ಅರ್ಚಕ ಅವರಿಂದ ‘ಶ್ರೀರಾಘವೇಂದ್ರ ಸ್ವಾಮಿಗಳ ಚರಿತ್ರೆ, ಗ್ರಂಥಗಳ ವೈಶಿಷ್ಟ್ಯ’ದ ಬಗ್ಗೆ ಉಪನ್ಯಾಸಗಳು ನಡೆದವು.

ಮೂರು ದಿನವೂ, ಅಷ್ಟೋತ್ತರ, ಪಂಚಾಮೃತ, ಹಸ್ತೋದಕ, ಸಂತರ್ಪಣೆಗಳೂ ನಡೆದು ಪಲ್ಲಕ್ಕಿ, ಡೋಲೋತ್ಸವಗಳೊಂದಿಗೆ ಕಾರ್ಯಕ್ರಮ ಮುಗಿಯಿತು.

## ಧರ್ಮ ಪರಾವರ್ತನ

ಎರಡು ಮೂರು ತಲೆಮಾರುಗಳ ಹಿಂದೆ ಯಾವುದೋ ಕಾರಣದಿಂದ ಮತಾಂತರ ಹೊಂದಿದ ಕುಟುಂಬಗಳಲ್ಲಿನ ಐವರು ಪದವೀಧರರು ಹಿಂದೂ ಧರ್ಮಕ್ಕೆ ಮರಳಿ ಬಂದಿದ್ದಾರೆ.

ದಿನಾಂಕ 6—9—81 ರಂದು ಕೋಲಾರ ಚಿನ್ನದಗಣಿ ಪ್ರದೇಶದಲ್ಲಿನ ಶ್ರೀ ವೆಂಕಟರಮಣಸ್ವಾಮಿ ದೇವಸ್ಥಾನದಲ್ಲಿ ನಡೆದ ಸರಳ ಪರಾವರ್ತನ ಕಾರ್ಯಕ್ರಮದಲ್ಲಿ ಅನಂತಜೋಷಿ ಹಾಗೂ ವಿಶ್ವೇಶ್ವರಯ್ಯನವರುಗಳ ಪೌರೋಹಿತ್ಯದಲ್ಲಿ ಈ ಐವರೂ ಹಿಂದೂ ಧರ್ಮವನ್ನು ವಿಧಿವತ್ತಾಗಿ ಸ್ವೀಕರಿಸಿದರು. ನಂತರ ನಡೆದ ಪತ್ರಿಕಾಗೋಷ್ಠಿಯಲ್ಲಿ ಪರಾವರ್ತಿತರು ಮಾತನಾಡುತ್ತ ಧಾರ್ಮಿಕ ಕಾರಣಗಳಿಗಾಗಿಯೇ ತಾವು ಹಿಂದೂ ಧರ್ಮವನ್ನು ಸ್ವೀಕರಿಸಿರುವುದಾಗಿಯೂ, ಈ ಕ್ರಿಯೆ ಬಹುಕಾಲದ ಚಿಂತನೆಯ ಫಲವೆಂದೂ ತಿಳಿಸಿದರು.

ಪರಾವರ್ತಿತರಿಗಾಗಿ ಸಂಜೆ ನಡೆದ ಸಾರ್ವಜನಿಕ ಸ್ವಾಗತ ಸಭೆಯಲ್ಲಿ ದಲಿತ ಕ್ರಿಯಾರಂಗದ ಸಂಯೋಜಕರೂ, ಹಿಂದೂ ಭ್ರಾತೃತ್ವವೇದಿಕೆಯ ಸದಸ್ಯರೂ ಆದ ಶ್ರೀ ಎಂ. ಎಸ್. ಕನಕರಾಜನ್ ಅವರು ಶ್ರೀ ಚಾಂದಿಮಾ ಥೇರೋ (ಧರ್ಮದೂತ್ ಸೊಸೈಟಿ) ಅವರ ಅಧ್ಯಕ್ಷತೆಯಲ್ಲಿ ಹಿಂದೂ ಧರ್ಮ ತತ್ತ್ವಗಳನ್ನು ಉದ್ಘೋಷಿಸಿ,ಪರಾವರ್ತಿತರನ್ನು ಸ್ವಾಗತಿಸಿದರು. ಶ್ರೀಗೋಕರೆ ಸುಬ್ಬರಾಮಯ್ಯ (ಗೌರವ ಪ್ರತಿನಿಧಿ ತಿ.ತಿ.ದೇ. ಹಿಂದೂ ಧರ್ಮ ರಕ್ಷಣ ಸಂಸ್ಥೆ) ಅವರೂ ಮಾತನಾಡಿದರು.

ಮುರಳಿಯವರು ಸ್ವಾಗತಿಸಿದ ಪರಾವರ್ತನ ಸಭೆಯನ್ನು ವಿಶ್ವೇಶ್ವರಯ್ಯನವರು ವಂದಿಸಿದರು.

# ವಾರ್ತಾಲಹರಿ



ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ
ಶ್ರೀ ಕೆ. ವಿ. ಕೃಷ್ಣರಾವ್.

## ತಿರುಮಲೆಗೆ ಭಾರತ ಸೈನ್ಯಾಧಿಕಾರಿ

ಭಾರತದ ಭೂಸೈನ್ಯಾಧಿಕಾರಿ ಶ್ರೀ ಕೆ. ವಿ. ಕೃಷ್ಣರಾವ್ ಅವರು ಈಚೆಗೆ ತಮ್ಮ ಕುಟುಂಬ ದೊಡನೆ ಶ್ರೀ ವೆಂಕಟೇಶ್ವರಸ್ವಾಮಿ ಆಲಯವನ್ನು ಸಂದರ್ಶಿಸಿ, ಭಗವಂತನ ಪೂಜೆ ಆರಾಧನೆಗಳಲ್ಲಿ ಪಾಲುಗೊಂಡರು. ಆಲಯ ಮರ್ಯಾದೆಗಳೊಡನೆ ಅವರನ್ನು ಸ್ವಾಗತಿಸಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್ ಅವರು ದೇವಾಲಯದ ಇತಿಹಾಸವನ್ನೂ ಇಂದಿನ ಧರ್ಮ ಪ್ರಸಾರ ಕಾರ್ಯಗಳನ್ನೂ ವಿವರಿಸಿದರು. ನಂತರ ಕೃಷ್ಣರಾಯರು ತಿ.ತಿ.ದೇ.ಗಳಲ್ಲಿ ಕೆಲಸ ಮಾಡುವ ಮಾಜಿ ಸೈನಿಕರ ಸಂಕ್ಷೇಮ ನಿಧಿಗೆ ರೂ 3,000 ಗಳ ವಂತಿಗೆಯನ್ನು ನೀಡಿ, ಅವರ ಸಭೆಯಲ್ಲಿ ಮಾತನಾಡಿದರು. ದೇವಸ್ಥಾನಗಳಲ್ಲಿ 350 ಜನ ಮಾಜಿ ಸೈನಿಕರಿದ್ದಾರೆ.

## ಅಗಸ್ಟ್ ತಿಂಗಳಲ್ಲಿ ಏರಿದ ಕಲ್ಯಾಣೋತ್ಸವ ಸಂಖ್ಯೆ

ಶ್ರೀವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಭಕ್ತರು ಅರ್ಜಿತ ಸೇವೆಯಾಗಿ ಮಾಡಿಸುವ ಕಲ್ಯಾಣೋತ್ಸವಗಳು ಹೋದ ವರ್ಷ ಆಗಸ್ಟ್ ತಿಂಗಳಿಗಿಂತ ಗಮನಾರ್ಹವಾಗಿ ಹೆಚ್ಚಿದ್ದು ವರದಿಯಾಗಿದೆ. ಅದರಂತೆ 1980ರ ಆಗಸ್ಟ್ ಮಾಹೆಯಲ್ಲಿ 953 ಕಲ್ಯಾಣೋತ್ಸವಗಳಾಗಿದ್ದರೆ 1981ರ ಆಗಸ್ಟ್‌ನಲ್ಲಿ 1385 ಕಲ್ಯಾಣೋತ್ಸವಗಳಾದವು. ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿನ ಹುಂಡಿಯ ವಸೂಲಾತಿ, ಅರ್ಜಿತ ಸೇವೆ, ಪ್ರಸಾದ ವಿತರಣೆಗಳ ಒಟ್ಟು ಆದಾಯ 1981ರ ಆಗಸ್ಟ್‌ನಲ್ಲಿ ರು. 1,14,83,170=60 ಎಂದೂ ಈ ಅವಧಿಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನ ಪಡೆದವರು 6,28,148 ಮಂದಿ ಎಂದೂ ವರದಿಯಾಗಿದೆ.

## ವೇದ ಆಶೀರ್ವಚನ ಸೇವೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಗೃಹಸ್ಥ ಭಕ್ತರ ಅನುಕೂಲಕ್ಕಾಗಿ ವೇದ ಆಶೀರ್ವಚನ ಸೇವೆಯನ್ನು ಆರಂಭಿಸಲಾಗಿದೆ. ಈ ಸೇವೆಯಲ್ಲಿ ರೂ. 250 ಸಲ್ಲಿಸಿದ ಗೃಹಸ್ಥರ ನಾಲ್ಕು ಮಂದಿಗೆ ಸ್ವಾಮಿ ದರ್ಶನದ ನಂತರ ಆಲಯದ ಹಳೆಯ ಕಲ್ಯಾಣ ಮಂಟಪದಲ್ಲಿ ವೇದಪಂಡಿತರಿಂದ ವೇದೋಕ್ತ ಆಶೀರ್ವಾದ ಲಭಿಸುವುದು. ಈ ಅವಕಾಶವು ಉಪನಯನವಾದವರ ಗುಂಪಿಗೆ; ಮದುವೆಯಾದವರ ಗುಂಪಿಗೆ, ಹುಟ್ಟು ಹಬ್ಬದ ಉತ್ಸವದ ಗುಂಪಿಗೆ, ಷಷ್ಟಿಪೂರ್ತಿಯಾದವರ ಗುಂಪಿಗೆ, ಮನೆಯವರ ಒಳಿತಿಗಾಗಿ ಆಶೀರ್ವಚನ ಪಡೆಯ ಬಯಸುವವರಿಗೆ ಅನ್ವಯಿಸುವುದು. ಈ ಸೇವೆಯಲ್ಲಿ ಆಶೀರ್ವಚನ ನಾಲ್ವರಿಗೆ ಮಾತ್ರ ಸೀಮಿತವಿದ್ದು, ಈ ಸೇವೆಯನ್ನು ದರ್ಶಿಸ ಬಯಸುವ ಇತರರು ತಲೆಯೊಂದಕ್ಕೆ ರೂ. 25 ಗಳ ಅಧಿಕ ಹಣವನ್ನು ನೀಡಬೇಕಾಗುತ್ತದೆ. ಬೆಳಗಿನಿಂದ ಸಂಜೆಯವರೆಗೆ ದೇವಸ್ಥಾನದ ಅನುಕೂಲದಂತೆ ಯಾವುದೇ ಹೊತ್ತಿನಲ್ಲಿ ನಡೆಯಬಹುದಾದ ಈ ಸೇವೆಯಲ್ಲಿ ಭಾಗವಹಿಸುವವರಿಗೆ ಶ್ರೀಯವರ ಮಹಾಪ್ರಸಾದವಾದ ಶ್ರೀಪಾದರೇಣು, ಚಂದನ, ಅಕ್ಷತೆಗಳನ್ನು ನೀಡಲಾಗುವುದು.



ಲಲಿತಾನವಿಲೆ ಅವರನ್ನು ಸನ್ಮಾನಿಸುತ್ತ ಶ್ರೀಮತಿ ಗೋಪಿಕಾಪ್ರಸಾದ್.

## ಕ್ಯಾಸೆಟ್ ಬಿಡುಗಡೆ

ತಿ. ತಿ. ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್‌ನ ವತಿಯಿಂದ ಸಂತ ಪುರಂದರದಾಸರ ಜೀವನದ ವಿವಿಧ ಮುಖಗಳನ್ನು ಬಿಂಬಿಸುವ ಶ್ರೀಮತಿ ಲಲಿತಾನವಿಲೆ ಅವರಿಂದ ರಚಿಸಿ ಹಾಡಲ್ಪಟ್ಟ ತಿಲ್ಲಾನಗುಚ್ಛದ ಕ್ಯಾಸೆಟ್ ಅನ್ನು ಈಚೆಗೆ ಬಿಡುಗಡೆ ಮಾಡಲಾಯಿತು.

ಕ್ಯಾಸೆಟ್ ಅನ್ನು ಬಿಡುಗಡೆ ಮಾಡಿದ ಪಿ.ವಿ. ಆರ್.ಕೆ. ಪ್ರಸಾದರು ದಾಸಸಾಹಿತ್ಯ ಪ್ರಾಜೆಕ್ಟಿನ ವಿವಿಧೋದ್ದೇಶಗಳನ್ನು ವಿವರಿಸಿದರು.

ಕೆ. ಅಪ್ಪಣಾಚಾರ್ಯ ರಿಂದ ಸ್ವಾಗತಿಸಲ್ಪಟ್ಟ ಸಭೆಯಲ್ಲಿ ಕ್ಯಾಸೆಟ್‌ನ ಹಾಡುಗಾರ್ತಿಯವರ ಸಂಗೀತವೂ ನಡೆದು ಅವರನ್ನು ಶ್ರೀಮತಿ ಗೋಪಿಕಾಪ್ರಸಾದರು ಸನ್ಮಾನಿಸಿದರು.

---

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ
# ಪರಕಾಮಣಿ

ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದ ಹುಂಡಿಯಲ್ಲಿನ ದೈನಂದಿನ ಕಾಣಿಕೆಗಳನ್ನು ವಿಂಗಡಿಸಿ, ಅವುಗಳ ಲೆಕ್ಕಮಾಡುವುದನ್ನು ಪರಕಾಮಣಿ ಎನ್ನುತ್ತಾರೆ.

### ಇಲ್ಲಿ ಯಾತ್ರಿಕ ಸಾಕ್ಷಿಯ ಪಾತ್ರವೇನು?

ಯಾತ್ರಿಕ ಸಾಕ್ಷಿಯ ಕೆಲಸವು ಪರಕಾಮಣಿಯಲ್ಲಿ ಕುಳಿತು ಅಲ್ಲಿನ ಕಾರ್ಯಕ್ರಮಗಳನ್ನು ಎಚ್ಚರಿಕೆಯಿಂದ ಗಮನಿಸುವುದಾಗಿದೆ. ಪರಕಾಮಣಿಯಲ್ಲಿ ತೊಡಗಿರುವ ಕೆಲಸಗಾರರನ್ನು ಅವರು ತಮ್ಮ ಕೆಲಸ ನಿರ್ವಹಿಸುತ್ತಿರುವಾಗ ನೋಡಿಕೊಳ್ಳುವುದಾಗಿದೆ. ಯಾವೊಬ್ಬ ಕೆಲಸಗಾರನಾದರೂ ಪರಕಾಮಣಿಯಲ್ಲಿ ಚೌರ್ಯ ಅಥವಾ ತಪ್ಪುಗೆಲಸವನ್ನು ಮಾಡುತ್ತಿದ್ದಲ್ಲಿ ಯಾತ್ರಿಕ ಸಾಕ್ಷಿಯು ಕೂಡಲೇ ಅಲ್ಲಿಯೇ ಇರುವಂತಹ ಅಧಿಕಾರಿಗೆ ಸೂಕ್ತ ಕ್ರಮವನ್ನು ಕೈಗೊಳ್ಳಲು ತಿಳಿಸಬೇಕು.

ಯಾತ್ರಿಕ ಸಾಕ್ಷಿಯು ಪರಕಾಮಣಿ ಪೂರ್ತಿಯಾಗುವವರೆಗೂ ಅಲ್ಲಿಯೇ ಇದ್ದು, ದೇವರ ದರ್ಶನವನ್ನು ಪಡೆದು ಪ್ರಸಾದವನ್ನು ಪಡೆಯ ಬೇಕು.

(37 ನೇ ಪುಟದಿಂದ)
ಬೇರ್ಪಡೆ ಸಂಭವವಿದೆ. ಹೊಟ್ಟೆನೋವು, ಗೌರವಲಾಭಗಳು ಸೂಚಿತ. 19 ರ ನಂತರ ದುಷ್ಟ ಸಲಹೆಗಳಿಗೆ ಬಲಿಬೀಳಬಹುದು.

ಉತ್ತರಾ 2, 3, 4, ಪಾದದವರಿಗೆ 3, 10, 12, 19, 21, 26,

ಹಸ್ತದವರೆಗೆ 9 ರ ಮಧಾಹ್ನ 13, 18, 20, 25,

ಚಿತ್ತಾ 1, 2 ಪಾದದವರಿಗೆ 3, 10, 12, 17, 19, 21

ಒಳಿತಿನ ದಿನಗಳು.

## ತುಲಾ :

ಧನಲಾಭ, ಯಶಸ್ಸು ಆದರೆ ಅಧಾರ್ಮಿಕ ಪ್ರವರ್ತನೆ ಸೂಚಿತ. 17 ರ ನಂತರ ಪ್ರಯಾಣ ಪ್ರಯಾಸ. ದುಷ್ಟ ಸಲಹೆಗಳ ಬಗ್ಗೆ ಎಚ್ಚರ ವಹಿಸುವುದು ಒಳಿತು. ಗೃಹ ಸಂಪದಭಿವೃದ್ಧಿಯಿದೆ. ವಿವಾದಗಳೂ ಇವೆ.

ಚಿತ್ತಾ 3, 4, ಪಾದಗಳವರಿಗೆ 1, 5, 12, 14, 21, ರ ಮಧ್ಯಾಹ್ನ 24

ಸ್ವಾತಿಯವರಿಗೆ 2, 6, 13, 20, 24, ರ ಮಧ್ಯಾಹ್ನ.

ವಿಶಾಖ 1, 2, 3 ಪಾದದವರಿಗೆ 1, 5, 12, 14, 21, 24, ರ ಮಧ್ಯಾಹ್ನ ಹಾಗೂ 27 ಒಳಿತಿನ ದಿನಗಳು.

## ವೃಶ್ಚಿಕ :

ಹೊಸ ಸ್ಫೂರ್ತಿಯಿಂದ ಧನಾಗಮ, ಕೀರ್ತಿ, ಪ್ರಣಯಭಾವ. 17 ರ ಮೊದಲು ವಿಶೇಷ ಒಳ್ಳೆಯದು. ಒಳ್ಳೆಯ ಸ್ನೇಹ ಲಾಭ, 17 ರ ನಂತರ ಪ್ರಯಾಣ. ದುಷ್ಟ ಸಲಹೆಗಳ ಬಗ್ಗೆ ಎಚ್ಚರವಿರಬೇಕು. ತುಸು ಹೊಟ್ಟೆ ನೋವು.

ವಿಶಾಖ 4ನೇ ಪಾದದವರಿಗೆ 3, 9, 14, 16, 23, 25

ಅನೂರಾಧದವರಿಗೆ 6, 17, 23 ಹಾಗೂ 24 ಮಧ್ಯಾಹ್ನಗಳು 28

ಜ್ಯೇಷ್ಠಾದವರಿಗೆ 3, 7 ರ ಮಧ್ಯಾಹ್ನ 9, 14, 16, 22 ರ ಮಧ್ಯಾಹ್ನ, 23 25ರ ಬೆಳಗ್ಗೆ ಒಳಿತಿನ ದಿನಗಳು.

## ಧನುಸ್ಸು :

19 ರ ನಂತರ ಧನ, ವಸ್ತ್ರ ಲಾಭ, ಯಶಸ್ಸು. ಆದರೆ ಈ ತಿಂಗಳಲ್ಲಿ ವ್ಯಯವೂ ಅಧಿಕ 10 ರ ಮೊದಲು ತುಸು ದೇಹಘಾತ. ಹೊಸ ಕಾರ್ಯಗಳನ್ನು ಮಾಡದಿರುವುದು ಲೇಸು.

ಮೂಲಾದವರಿಗೆ 1, 6, 10, 17, 19, 26,

ಪೂರ್ವಾಷಾಢ ದವರಿಗೆ 1 ರ ಮಧ್ಯಾಹ್ನ 11, 16, 21, 25, 27,

ಉತ್ತರಾಷಾಢ 1ನೇಪಾದದವರಿಗೆ 1, 5, 10, 17, 19, 26

ಒಳಿತಿನ ದಿನಗಳು.

## ಮಕರ :

ಧನಲಾಭ ಹಾಗೂ ಸ್ನೇಹಲಾಭ. 10 ರ ಮೊದಲು ಹೆಂಡತಿಯೊಡನೆ ತಗಾದೆ ಅಥವಾ ಕಣ್ಣು ನೋವು. ಧನಕ್ಕಾಗಿ ಅಪಮಾರ್ಗ ಪ್ರವರ್ತನೆಯಲ್ಲಿ ತೊಡಗುವಿಕೆ. 17 ರ ನಂತರ ಯಶಸ್ಸು, ಧನವ್ಯಯ ಒಟ್ಟಿನಲ್ಲಿ ಈ ತಿಂಗಳು ಸಾಧಾರಣ ಆದರೂ 10 ರ ನಂತರ ವಾಹನ ಭಯ.

ಉತ್ತರಾಷಾಢ 2, 3, 4 ನೇ ಪಾದಗಳ ವರಿಗೆ 1, 3, 8, 1`, 18ರ ಮಧ್ಯಾಹ್ನ 19ರ ಬೆಳಗ್ಗೆ

ಶ್ರವಣದವರಿಗೆ 2, 9, 12, 18, 20,

ಧನಿಷ್ಠಾ 1, 2 ಪಾದದವರಿಗೆ 1, 8, 10, 12, 19, 21, 26

ಒಳಿತಿನ ದಿನಗಳು.

## ಕುಂಭ :

ಧನಾಗಮ- ಪ್ರಯಾಣ ಹಾಗೂ ಪ್ರಯಾಸ ಅಥವಾ ಆಪ್ತರಿಂದ ಬೇರ್ಪಡೆ ಅಥವಾ ತುಸು ಅನಾರೋಗ್ಯ. 10 ರ ನಂತರ ಹೆಂಡತಿ ಯೊಡನೆ ವಿವಾದ 17, ರ ನಂತರ ಒಳಿತು. ಒಟ್ಟಿನಲ್ಲಿ ಸಾಧಾರಣ ತಿಂಗಳು.

ಧನಿಷ್ಠಾ 3, 4, ನೇ ಪಾದದವರಿಗೆ 3, 5, 10, 14, 21, 23,

ಶತಭಿಷಾದವರಿಗೆ 6, 20, 24,

ಪೂರ್ವಾಭಾದ್ರ 2, 3, ಪಾದಗಳವರಿಗೆ 3, 5, 10, 24, 22, 24, ರ ಮಧ್ಯಾಹ್ನ

ಒಳಿತಿನ ದಿನಗಳು.

## ಮೀನ :

20 ರ ಮೊದಲು ಪ್ರಯಾಣ ಅಥವಾ ಹೊಟ್ಟೆ ನೋವು ಅಥವಾ ಹೆಂಡತಿಯ ಅತೃಪ್ತಿ. ಹೆಣ್ಣು ಮಕ್ಕಳ ಚಿಂತೆ. ನಂತರ ಒಳಿತು. ತುಸು ಧನವ್ಯಯ, ಚಿಂತೆಗಳಿದ್ದರೂ ಉತ್ಸಾಹದಿಂದ ತಿಂಗಳು ಕಳೆಯುತ್ತದೆ.

ಪೂರ್ವಾಭಾದ್ರ 3, 4, ನೇಪಾದದವರಿಗೆ 5, 7, 9, 22, 23, 25,

ಉತ್ತರಾಭಾದ್ರದವರಿಗೆ 6, 8, 13, 17 24, 26,

ರೇವತಿಯವರಿಗೆ 5, 7, 9, 12, 16, 18, 23, 25, 27

ಒಳಿತಿನ ದಿನಗಳು.

---




Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 200 |
| 2. | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5. | ಜಾಫ್ರಾ* | ರೂ 100 |
| 6. | ಕಸ್ತೂರಿ* | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 2500 |
| 8. | ತಿರುಪ್ಪಾವಡಾ | ರೂ 5000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 1745 |
| 10. | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 2500 |
| ಕಲ್ಯಾಣೋತ್ಸವ | ರೂ 1500 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1 ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ :

**ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ. ಒಳಗಿನ ಕಾಟೇಜುಗುಳು | ,, | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 15–00 |
| ಶೇಷಾದ್ರಿನಗರ ,, | ,, | ರೂ 15–00 |
| ಅಂಜನಾದ್ರಿನಗರ ,, | ,, | ರೂ 15–00 |
| ಗರುಡಾದ್ರಿನಗರ ,, | ,, | ರೂ 15–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳ ಕೋಣೆ | ರೂ 12–00 |
| ನಾಲ್ಕು ,, | ರೂ 15–00 |
| ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ : ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.



★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

### ಹಲವು ನಾಮಜಪಗಳನ್ನು ಸೂಚಿಸಲಾಗಿದೆ [illegible] ಇಷ್ಟವಾದುದನ್ನು ಆಯ್ಕೆ ಮಾಡಿಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ [illegible]

ನಮೋ ಭಗವತೇ ವಾಸು[illegible]

ನಮೋ [illegible]ಣಾಯ

[illegible]

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರ[illegible]ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.